ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್.ಪದವಿಯ ನಿಬಂಧ



# "ಲಂಕೇಶ್ ಕಾವ್ಯ - ಸಂಸ್ಕೃತಿ ಚಿಂತನೆ"

ಸಂಶೋಧನಾ ವಿದ್ಯಾರ್ಥಿನಿ
ಶಿಲ್ಪ.ಎಸ್.
Reg.No.KVMBKS-00439

ಮಾರ್ಗದರ್ಶಕರು
ಡಾ.ವಿ.ಚಂದ್ರಶೇಖರ ನಂಗಲಿ

ಕಾವ್ಯಮಂಡಲ
ನಂ.೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನಗುಡಿ
ಬೆಂಗಳೂರು - ೫೬೦೦೦೪

೨೦೦೯-೧೦

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್.ಪದವಿಯ ನಿಬಂಧ



# "ಲಂಕೇಶ್ ಕಾವ್ಯ - ಸಂಸ್ಕೃತಿ ಚಿಂತನೆ"


ಸಂಶೋಧನಾ ವಿದ್ಯಾರ್ಥಿನಿ

ಶಿಲ್ಪ.ಎಸ್.

Reg.No.KVMBKS-00439

ಮಾರ್ಗದರ್ಶಕರು

ಡಾ.ವಿ.ಚಂದ್ರಶೇಖರ ನಂಗಲಿ



ಕಾವ್ಯಮಂಡಲ

ನಂ.೧೩/೭೫, ರಾಷ್ಟ್ರೀಯ ವಿದ್ಯಾಲಯ ರಸ್ತೆ

ಬಸವನಗುಡಿ

ಬೆಂಗಳೂರು - ೫೬೦೦೦೪

೨೦೦೯-೧೦

# ದೃಢೀಕರಣ ಪತ್ರ

**"ಲಂಕೇಶ್ ಕಾವ್ಯ – ಸಂಸ್ಕೃತಿ ಚಿಂತನೆ"** ಎಂಬ ವಿಷಯವನ್ನು ಕುರಿತು ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರಿಗೆ ಎಂ.ಫಿಲ್ ಪದವಿಗಾಗಿ **ಡಾ.ವಿ.ಚಂದ್ರಶೇಖರ ನಂಗಲಿ** ಅವರ ಮಾರ್ಗದರ್ಶನದಲ್ಲಿ ಸಂಶೋಧನಾ ವಿದ್ಯಾರ್ಥಿಯಾದ ನಾನು ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿದ್ದೇನೆ. ಈ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಪ್ರಕಟಣೆಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ತಮ್ಮ ವಿಶ್ವಾಸಿ,

Shilpa. S

(ಶಿಲ್ಪ.ಎಸ್)
ಸಂಶೋಧನಾ ವಿದ್ಯಾರ್ಥಿನಿ
ಕಾವ್ಯಮಂಡಲ
ನಂ.೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ
ಬಸವನಗುಡಿ
ಬೆಂಗಳೂರು – ೫೬೦೦೦೪

ಸ್ಥಳ : ಬೆಂಗಳೂರು
ದಿನಾಂಕ : 12/9/2010

## ಮಾರ್ಗದರ್ಶಕರ ಪ್ರಮಾಣಪತ್ರ

**"ಲಂಕೇಶ್ ಕಾವ್ಯ – ಸಂಸ್ಕೃತಿ ಚಿಂತನೆ"** ಎಂಬ ವಿಷಯವನ್ನು ಕುರಿತು ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸಲು **ಶಿಲ್ಪ.ಎಸ್.** ಅವರು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿದ್ದಾರೆ. ಈ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ ಪದವಿ, ಪ್ರಕಟಣೆಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

(ಡಾ.ವಿ.ಚಂದ್ರಶೇಖರ ನಂಗಲಿ)

ವಿ. ಚಂದ್ರಶೇಖರ (ನಂಗಲಿ)
ಪ್ರಿನ್ಸಿಪಾಲರು,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ಹಾನಗಲ್ಲ-581 104. ಜಿ॥ ಹಾವೇರಿ.

ಸ್ಥಳ : ಬೆಂಗಳೂರು
ದಿನಾಂಕ: 12/1/2010

| ಪರಿವಿಡಿ | ಪುಟಸಂಖ್ಯೆ |
|---|---|

## ಅಧ್ಯಾಯ – ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ನವ್ಯತೆಯಿಂದ ಆರಂಭಿಸಿ ಆ ಚೌಕಟ್ಟನ್ನು ಮೀರಿ ಸಾಹಿತ್ಯರಚನೆ ಮಾಡಿದ ಲೇಖಕ ಪಿ.ಲಂಕೇಶ್ (೧೯೩೫–೨೦೦೦). ಕಾವ್ಯ, ಕತೆ, ಕಾದಂಬರಿ, ನಾಟಕ, ಲೇಖನ, ಅನುವಾದ ಹೀಗೆ ಸಾಹಿತ್ಯದ ಎಲ್ಲ ಪ್ರಕಾರದಲ್ಲೂ ತಮ್ಮ ಬರವಣಿಗೆಯ ಚಾಪನ್ನು ಮೂಡಿಸಿ ಆ ಮೂಲಕವೇ ಸಂಸ್ಕೃತಿ ಚಿಂತನೆಯನ್ನು ಮಾಡಿದವರು. ನವ್ಯ ಸಾಹಿತ್ಯ ಮತ್ತು ದಲಿತ–ಬಂಡಾಯ ಸಾಹಿತ್ಯದ ಧ್ಯೇಯ ಧೋರಣೆಗಳನ್ನು ಪ್ರತ್ಯೇಕವಾಗಿ ನೋಡದೆ ಇವೆರಡನ್ನೂ ಬಳಸಿ ಸಾಹಿತ್ಯ ರಚನೆ ಮಾಡುವುದರ ಮೂಲಕ ನವ್ಯದ ಚೌಕಟ್ಟನ್ನು ಮೀರಿ ನಿಲ್ಲುತ್ತಾರೆ. ಈ ರೀತಿಯ ಸಾಂಸ್ಕೃತಿಕ ರಚನೆಯನ್ನು ಲಂಕೇಶರು ತಮ್ಮ ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲೂ ಮಾಡಿದ್ದಾರೆ.

ಪ್ರಸ್ತುತ ಈ ಪ್ರಬಂಧವು ಲಂಕೇಶರ ಕಾವ್ಯವನ್ನು ಒಳಗೊಂಡಿದ್ದು, ಅವರು ಕಾವ್ಯದ ಮೂಲಕ ಮಾಡಿದ ಸಂಸ್ಕೃತಿ ಚಿಂತನೆಯನ್ನು ಗುರುತಿಸುವ ಪ್ರಯತ್ನದಲ್ಲಿದೆ. ಆಧುನಿಕೋತ್ತರ ಸಂದರ್ಭದಲ್ಲಿ ಎದುರಾದ ಜಾಗತೀಕರಣಕ್ಕೆ ತಮ್ಮ ಕಾವ್ಯದ ಮೂಲಕ ಮುಖಾಮುಖಿ ಆಗುವುದರೊಂದಿಗೆ ಯಾಂತ್ರೀಕರಣವನ್ನು ವಿರೋಧಿಸುತ್ತಾ, ಅದರ ಕಟುವಿಮರ್ಶೆಯನ್ನು ಮಾಡುವುದರೊಂದಿಗೆ ಪರ್ಯಾಯ ಸಂಸ್ಕೃತಿಯೊಂದನ್ನು ಬಯಸುವ ಹಂಬಲವನ್ನು ಇವರ ಕಾವ್ಯದಲ್ಲಿ ಕಾಣಬಹುದು.

೧೯೬೦–೭೦ರಲ್ಲಿ ಬರವಣಿಗೆಯಲ್ಲಿ ತೊಡಗಿದ್ದ ಲಂಕೇಶ್ ಆ ಸಂದರ್ಭದಲ್ಲಿ ಹೆಚ್ಚು ಪ್ರಚಲಿತವಿದ್ದ ಅಸ್ತಿತ್ವವಾದ, ಅಸಂಗತವಾದವನ್ನು ಬಳಸಿಕೊಂಡು ರಚನೆ ಮಾಡಿದ್ದರೂ ಅವೆಲ್ಲವೂ ಸಮಾಜಾಭಿಮುಖಿ ಬರವಣಿಗೆಗಳಾಗಿವೆ. ವಸಾಹತುಶಾಹಿ ತಂದೊಡ್ಡಿದ್ದ ಜಾಗತೀಕರಣಕ್ಕೆ ಸಿಲುಕಿಕೊಂಡು ತನ್ನ ಇರುವಿಕೆಯ ನೆಲೆಯನ್ನು ಹುಡುಕಾಡುವುದರ ಚಿತ್ರಣವನ್ನು ಅವರ ಕಾವ್ಯದಲ್ಲಿ ಗುರುತಿಸಬಹುದು.

ಲಂಕೇಶರ ಕಾವ್ಯ ಹೀಗೆ ವ್ಯಕ್ತಿಯ ಸಾಮಾಜಿಕ ಜೀವನದ ಆಗು–ಹೋಗುಗಳತ್ತ ಗಮನವಿರಿಸಿಕೊಂಡು ಚಿತ್ರಿತವಾಗಿದೆ. ಸಂಬಂಧಗಳ ನಡುವಿನ ಬಿರುಕನ್ನು, ಮತೀಯವಾದ, ಕೋಮುವಾದ, ರಾಜಕೀಯ ವಿಡಂಬನೆ, ವ್ಯಕ್ತಿಚಿತ್ರಣವನ್ನು, ಗ್ರಾಮೀಣ ಜನರ ಬದುಕಿನ ಶೈಲಿಯನ್ನು ನಾಗರೀಕ ಬದುಕಿನ ದುರಂತವನ್ನು ಬಿಚ್ಚಿಡುತ್ತಾ ರಾಜಕೀಯ ಮತ್ತು ಸಾಂಸ್ಕೃತಿಕ ಬದಲಾವಣೆಯನ್ನು ಅತ್ಯಂತ ನಿಷ್ಠುರವಾಗಿ ಕಟ್ಟಿಕೊಡುತ್ತಾರೆ.

ಲಂಕೇಶರ ಕವನಸಂಕಲನಗಳು, 'ಇಂಚರ'(೧೯೫೬), 'ತಲೆಮಾರು'(೧೯೭೩), 'ಬಿಚ್ಚು'(೧೯೫೬), ಈ ಸಂಕಲನಗಳನ್ನೂ ಒಳಗೊಂಡಂತೆ ೧೯೮೦ರಿಂದೀಚಿನ ಕವನವನ್ನು 'ಚಿತ್ರಸಮೂಹ' ಹೆಸರಿನಲ್ಲಿ ೧೯೯೯ರಲ್ಲಿ ಹೊರತಂದಿದ್ದಾರೆ. ಪತ್ರಿಕೆಗಾಗಿ ಬರೆಯುತ್ತಿದ್ದ ಕವನವನ್ನು 'ನೀಲು' ಹೆಸರಿನಲ್ಲಿ ಮೂರು ಸಂಪುಟಗಳಲ್ಲಿ ಹೊರತರಲಾಗಿದೆ. 'ನೀಲುಕಾವ್ಯ'(ಸಂಗ್ರಹ-೧, ೨೦೦೭), 'ನೀಲುಕಾವ್ಯ'(ಸಂ-೨;೨೦೦೯) ನೀಲುಕಾವ್ಯ (ಸಂಗ್ರಹ-೩, ೨೦೧೦), ಬೋದಿಲೇರ್ ಕವಿಯ ಕವನವನ್ನು ೧೯೭೪ರಲ್ಲಿ 'ಪಾಪದ ಹೂವುಗಳು' ಎಂಬ ಶೀರ್ಷಿಕೆಯ ಅಡಿಯಲ್ಲಿ ಅನುವಾದವನ್ನು ಮಾಡಿದ್ದಾರೆ. ಈ ಎಲ್ಲಾ ಕವನ ಸಂಕಲನಗಳ ಆಧಾರದ ಮೇಲೆ "ಲಂಕೇಶ್ ಕಾವ್ಯ-ಸಂಸ್ಕೃತಿ ಚಿಂತನೆ" ಎನ್ನುವ ವಿಷಯವನ್ನು ಪ್ರಬಂಧ ಬರೆಯಲು ಆಯ್ಕೆ ಮಾಡಿಕೊಳ್ಳಲಾಗಿದೆ.

ಇವರ ಸಾಹಿತ್ಯಗಳ ಬಗೆಗೆ ಇದುವರೆಗೂ ನಡೆದಿರುವ ಅಧ್ಯಯನವನ್ನು, ವಿಮರ್ಶಾ ಸಂಕಲನವನ್ನು ಗಮನಿಸಿದರೆ ಅವರ ಕಾದಂಬರಿ, ಕತೆ, ನಾಟಕದ ಮೇಲೆ ಹೆಚ್ಚಾಗಿ ಕಾಣಬಹುದೆ ಹೊರತು ಕಾವ್ಯದ ಬಗೆಗೆ ಅಷ್ಟಾಗಿ ಕಂಡುಬರುವುದಿಲ್ಲ. ಇವರ 'ಅವ್ವ' ಕವನವನ್ನು ಹೊರತು ಪಡಿಸಿ ಇನ್ನುಳಿದ ಕವನದ ಮೇಲೆ ಯಾವುದೇ ರೀತಿಯ ಅಧ್ಯಯನವಾಗಲಿ ಅಥವಾ ವಿಮರ್ಶೆಯಾಗಲಿ ಕಂಡುಬರುವುದಿಲ್ಲ.

'ಬೋದಿಲೇರ್ ಸಖ' ಲಂಕೇಶ್ ನೆನಪಿನ ಸಂಪುಟ ಇಲ್ಲಿ 'ಸಂಕ್ರಾಂತಿ' ಹಾಗೂ 'ಗುಣಮುಖ' ನಾಟಕಗಳ ಬಗ್ಗೆ ಅಕ್ಕ, ಬಿರುಕು, ಕಾದಂಬರಿಯ ಬಗ್ಗೆ ಹಾಗೂ ಅವರ 'ಕಲ್ಲು ಕರಗುವ ಸಮಯ' ಕಥಾಸಂಕಲನದ ಬಗ್ಗೆ ಲೇಖನಗಳನ್ನು ಬರೆಯಲಾಗಿದೆ. ಆದರೆ ಅವರ 'ಅವ್ವ' ಕವಿತೆಯನ್ನು ಹೊರತು ಪಡಿಸಿ ಕಾವ್ಯಗಳ ಬಗೆಗೆ ಮಾತನಾಡುವುದೇ ಇಲ್ಲ.

ಶಾಂತಿನಾಥ ದೇಸಾಯಿಯವರ 'ನವ್ಯ ಸಾಹಿತ್ಯದರ್ಶನ' ಗ್ರಂಥವನ್ನು ನೋಡಿದಾಗ ಅಲ್ಲೂ ಕೂಡ ಅಕ್ಕ, ಬಿರುಕು ಕಾದಂಬರಿಯ ಬಗೆಗೆ ಗಮನ ಹರಿಸಿದ್ದಾರೆಯೇ ಹೊರತು ಕಾವ್ಯಗಳ ಬಗೆಗೆ ಎಲ್ಲೂ ಹೇಳುವುದಿಲ್ಲ.

ಕೆ.ಮರುಳಸಿದ್ದಪ್ಪನವರ 'ಪಿ.ಲಂಕೇಶ್' ಎನ್ನುವ ಪುಸ್ತಕದಲ್ಲಿ ಲಂಕೇಶ್‌ರವರ ಒಟ್ಟಾರೆ ಸಾಹಿತ್ಯವನ್ನು ಗಮನಿಸಿದ್ದು "ಕವಿಯಾಗಿ ಆರಂಭ" ಎನ್ನುವ ಲೇಖನದಲ್ಲಿ ಅವರ ಕಾವ್ಯವನ್ನು ಕುರಿತು ಮಾತನಾಡುತ್ತಾರೆ.

ಅದೇನೇ ಇದ್ದರೂ ಲಂಕೇಶ್ ಕಾವ್ಯದ ಬಗೆಗೆ ಬೆರಳೆಣಿಕೆಯ ಲೇಖನಗಳು ಹೊರಬಂದಿದ್ದು, ಅಷ್ಟಾಗಿ ಯಾವುದೇ ಅಧ್ಯಯನ ನಡೆದಿಲ್ಲ ಎನ್ನಬಹುದು. ಆದರೆ ಈ ಪ್ರಬಂಧದ ಮುಖ್ಯ ಉದ್ದೇಶ ಲಂಕೇಶ್ ಕಾವ್ಯದಲ್ಲಿ ಸಂಸ್ಕೃತಿ ಚಿಂತನೆಯನ್ನು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ಈ ಪ್ರಬಂಧದ ವ್ಯಾಪ್ತಿಯಲ್ಲಿ ನಾಲ್ಕು ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದೆ.

**೧. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತಿ ಚಿಂತನೆ :-**

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಲಂಕೇಶ್ ಬರವಣಿಗೆಯನ್ನು ಪ್ರಾರಂಭಿಸಿದ್ದು ನವ್ಯಕಾಲಘಟ್ಟದಲ್ಲಿ ನಂತರ ನವ್ಯೋತ್ತರದ ಕಡೆಗೆ ಚಲಿಸಿದ್ದನ್ನು ಅವರ ಸಾಹಿತ್ಯದಲ್ಲಿ ಗುರುತಿಸಬಹುದು. ಆದರೆ ಅವರ ರಚನೆ ಪ್ರಾರಂಭ ಮಾಡಿದ್ದು ನವ್ಯಕಾಲಘಟ್ಟವಾದ್ದರಿಂದ ಆ ಸಂದರ್ಭದಲ್ಲಿ ನಡೆದ ಸಂಸ್ಕೃತಿ ಚಿಂತನೆಯನ್ನು ಗುರುತಿಸುವುದು ಮುಖ್ಯವೆನಿಸುತ್ತದೆ. ಹಾಗಾಗಿ ಗೋಪಾಲಕೃಷ್ಣ ಅಡಿಗ ಮತ್ತು ಅನಂತಮೂರ್ತಿಯವರ ಸಾಹಿತ್ಯದ ಮೂಲಕ ನವ್ಯ ಸಂದರ್ಭ ಸಂಸ್ಕೃತಿಯನ್ನು ಅರ್ಥೈಸಿಕೊಂಡ ಕ್ರಮವನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ.

**೨. ಲಂಕೇಶ್ ಕಾವ್ಯದ ವಸ್ತುವಿನ ಚಹರೆಗಳು :-**

ಮೊದಲೇ ಹೇಳಿದಂತೆ ಲಂಕೇಶರ ಕಾವ್ಯ ರಾಜಕೀಯ ವಿಡಂಬನೆ, ಗ್ರಾಮೀಣ ಬದುಕಿನ ಶೈಲಿ, ನಗರ ಬದುಕಿನ ಯಾಂತ್ರೀಕರಣವನ್ನು, ಸಂಬಂಧಗಳ ನಡುವಿನ ಬಿಗು, ವ್ಯಕ್ತಿ-ಮನಸ್ಸುಗಳ ದ್ವಂದ್ವ, ಹೆಣ್ಣಿನ ಪ್ರಧಾನೀಕರಣವನ್ನು ಹೇಳುತ್ತದೆ. ಇವುಗಳ ಆಧಾರದ ಮೇಲೆ ಗ್ರಾಮೀಣ ನಗರ ಸಂಸ್ಕೃತಿಯ ಚಿತ್ರಣ, ಸಾಮಾಜಿಕ ಕಾಳಜಿ, ಹೆಣ್ಣಿನ ಚಿತ್ರಣವನ್ನು ಗ್ರಹಿಸುವುದರ ಮೂಲಕ ಅವರ ಸಂಸ್ಕೃತಿ ಚಿಂತನೆಯನ್ನು ಕಾಣಬಹುದು.

'ತಲೆಮಾರು, 'ಅಕ್ಕ-ತಮ್ಮ', 'ಅವ್ವ', 'ನನ್ನಸುತ್ತಾ', 'ನಮ್ಮ ಕಡೆಯ ಜನ', ಕವಿತೆಯು ಗ್ರಾಮೀಣ ಬದುಕನ್ನು ಹೇಳುತ್ತೇಳುತ್ತಾ ನಗರದ ಜನರ ದುರಂತ, ಯಾಂತ್ರಿಕತೆಯನ್ನು ಹೇಳುತ್ತದೆ. ಇನ್ನು ೧೯೮೦ರಿಂದೀಚೆಗೆ ಬರೆದ ಕವನಗಳಾದ 'ಮಾವಿನಮರದಡಿಯ ದೃಶ್ಯ', 'ಗೋಡೆಯ ಜನ', 'ಕಟ್ಟಿಗೆ ಹೊರೆ ಕೆಳಗೆ ನಗುವ ಮುಖ', ಮೊದಲಾದ ಕವಿತೆಗಳು ಸಮಾಜದಲ್ಲಿ ತಲೆದೋರಿದ್ದ ಜಾತಿಪದ್ಧತಿ, ಕೋಮುವಾದ, ಮತೀಯವಾದವನ್ನು ಅತ್ಯಂತ ತೀವ್ರವಾಗಿ ಕಟ್ಟಿಕೊಡುತ್ತಾ ಕೋಮುಸೌಹಾರ್ದವನ್ನು ಹೇಳುತ್ತಾ ಸಾಮಾಜಿಕ ಕಾಳಜಿ ಹೊಂದಿರುವ ಕವಿತೆಗಳಾಗಿವೆ. ಸ್ತ್ರೀಪಾತ್ರಗಳ ಚಿತ್ರಣವಂತೂ ಇವರ ಪ್ರತಿ ಕವನದಲ್ಲೂ ಗುರುತಿಸಬಹುದು.

ಇನ್ನು ಇವರ ಕಾವ್ಯದಲ್ಲಿ ಬರುವ ನಾಯಕ ಯಾಂತ್ರಿಕ ಜಗತ್ತಿನ ಕಟುವಿಮರ್ಶಕ. ನಗರ ಜೀವನದ ಜಂಜಾಟದಲ್ಲಿ ಯಾಂತ್ರೀಕೃತ ಜಗತ್ತಿನಿಂದ ಬೇಸತ್ತು ತನ್ನ ಹಳ್ಳಿಯ ಜೀವನವನ್ನು ಮೆಲುಕು ಹಾಕುತ್ತಾ ಮೂಲ ಬೇರುಗಳನ್ನು ಹುಡುಕುತ್ತಿರುವವನು. ತನ್ನ ನೆಲೆಯನ್ನು, ಅಸ್ತಿತ್ವವನ್ನು ಕಂಡುಕೊಳ್ಳಲು

ಹವಣಿಸುತ್ತಿರುವವನು. ಇಂತಹ ನಾಯಕರು ಒಂದು ಕಡೆಯಾದರೆ, ಹೆಣ್ಣಿನ ಪ್ರೀತಿ, ಪ್ರೇಮ ದೊರಕದೆ ತಮ್ಮ ಕಾಮವನ್ನು ಈಡೇರಿಸಿಕೊಳ್ಳಲು ಆಗದ ಭಗ್ನಪ್ರಣಯಿ ನಾಯಕರನ್ನು ಮತ್ತೊಂದು ಕಡೆ ಕಾಣಬಹುದು. ಹೀಗೆ ಲಂಕೇಶರ ಕಾವ್ಯದ ನಾಯಕರು ವ್ಯಕ್ತಿಗತ ನೆಲೆಯಿಂದ ಸಮಾಜಾಭಿಮುಖವಾಗಿ ಚಲಿಸುವಂತವರು. ಇವೆಲ್ಲದರ ಹುಡುಕಾಟವೇ ಈ ಅಧ್ಯಾಯದ ಉದ್ದೇಶವಾಗಿದೆ.

**೩. ಸಂಸ್ಕೃತಿಯ ಎಲ್ಲಾ ನೆಲೆಗಳನ್ನು ವ್ಯಾಖ್ಯಾನಿಸುವ ನೀಲು ಕವನಗಳು :-**

ಲಂಕೇಶರು ಪತ್ರಿಕೆಗಾಗಿ ಬರೆಯುತ್ತಿದ್ದ ಹಲವು ಕವಿತೆಗಳು ನೀಲು ಶೀರ್ಷಿಕೆಯಲ್ಲಿ ಮೂರು ಸಂಪುಟಗಳಲ್ಲಿ ಹೊರಬಂದಿದೆ. ಈ ಕವನಗಳು ಹೆಣ್ಣೊಬ್ಬಳ ಮೂಲಕ ನಿರೂಪಣೆಗೊಂಡಿದೆ. ಹೆಚ್ಚು ಕವನಗಳು ಆಕೆಯ ಇನಿಯನನ್ನು ಕುರಿತ ಕವನಗಳಾದರೆ, ಇನ್ನು ಕೆಲ ಕವನಗಳು ಸಮಾಜದ ವಿಡಂಬನೆಯನ್ನು ಮಾಡುತ್ತದೆ. ಈ ಕವನಗಳು ಮನುಷ್ಯನ ಬದುಕಿಗೆ ಹಿಡಿದ ಕೈಗನ್ನಡಿ ಎನ್ನಬಹುದು. ಹೀಗೆ ಮನುಷ್ಯನ ಸಂಸ್ಕೃತಿಯ ಎಲ್ಲಾ ನೆಲೆಯನ್ನು ಹೇಳುತ್ತದೆ. ಈ ಎಲ್ಲಾ ಅಂಶವನ್ನು ಗುರುತಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**೪. ಬೋದಿಲೇರನ ಮೂಲಕ ಸಂಸ್ಕೃತಿಯನ್ನು ಗ್ರಹಿಸುವ ಕ್ರಮ :-**

ಲಂಕೇಶ್ ಕತೆ, ನಾಟಕ, ಕಾವ್ಯ, ಕಾದಂಬರಿಯನ್ನು ಮಾತ್ರ ರಚಿಸಲಿಲ್ಲ ತಮ್ಮ ಸೃಜನಶೀಲತೆಯನ್ನು ಅನುವಾದಗಳಲ್ಲೂ ತೋರಿದ್ದಾರೆ. ಇವರು ಸೋಫೋಕ್ಲಿಸ್‌ನ 'ದೊರೆ-ಈಡಿಪಸ್' ಮತ್ತು 'ಅಂತಿಗೊನೆ' ನಾಟಕವನ್ನು ಅನುವಾದ ಮಾಡಿದ್ದು, ಹಲವು ಪಾಶ್ಚಾತ್ಯ ಕವಿಗಳಾದ ಎಜ್ರಾಪೌಂಡ್, ಆಂಡ್ರೂಮಾರ್ವೆಲ್, ಡಬ್ಲ್ಯೂ.ಬಿ.ಏಟ್ಸ್, ಕವಿಗಳ ಕವನವನ್ನು ಹಾಗೂ ಬೋದಿಲೇರನ ಕವನಗಳ 'ಪಾಪದ ಹೂವುಗಳು' ಶೀರ್ಷಿಕೆಯ ಅಡಿಯಲ್ಲಿ ಅನುವಾದ ಮಾಡಿದ್ದಾರೆ. ಈ ಅನುವಾದಗಳು ಕೇವಲ ಅನುವಾದವಾಗದೆ ಸ್ವತಂತ್ರ್ಯ ಕವನಗಳೇನೋ ಎಂದು ಭಾಸವಾಗುತ್ತದೆ.

ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಮೈದೋರಿದ ಕವನವನ್ನು ಇಲ್ಲಿನ ಸಂಸ್ಕೃತಿಗೆ ಒಗ್ಗಿಸಿಕೊಳ್ಳುವ ಚಾಕಚಕ್ಯತೆಯನ್ನು ತೋರುವುದರ ಮೂಲಕ ಸ್ವತಂತ್ರ ಕವನಗಳೇನೋ ಎಂದು ಭಾಸವಾಗುತ್ತದೆ. ಅವರ ಸ್ವತಂತ್ರ ರಚನೆಯ ಕವನವನ್ನು ಓದುವಾಗ ಕೆಲವು ಕವನದ ಮೇಲೆ ಅನುವಾದ ಕವನದ ಪ್ರಭಾವವನ್ನು ಸ್ವಲ್ಪಮಟ್ಟಿಗೆ ಗುರುತಿಸಬಹುದು. ಈ ಎಲ್ಲಾ ಅಂಶವನ್ನು ಗುರುತಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಈ ಎಲ್ಲಾ ಅಧ್ಯಾಯಗಳ ಮೂಲಕ ಇವರ ಕಾವ್ಯ ವ್ಯಕ್ತಿಗತ ನೆಲೆಯಿಂದ ಸಾಮಾಜಿಕವಾಗುತ್ತಾ ಹೋಗುವುದನ್ನು ಗುರುತಿಸಬಹುದು. ಹೀಗೆ ನವ್ಯತೆಯ ಚೌಕಟನ್ನು ಮೀರಿ,

ನವ್ಯದಿಂದ ನವ್ಯೋತ್ತರದ ಕಡೆಗೆ ಲಂಕೇಶರ ಕಾವ್ಯ ಹೊರಳುತ್ತದೆ. ಇವರ ಸಾಹಿತ್ಯದ ಮುಖ್ಯ ಕಾಳಜಿ ಇರುವ ಸಮಾಜವನ್ನು ಇರುವ ರೀತಿಯಲ್ಲೇ ಚಿತ್ರಿಸುತ್ತಾ ಕಟುವಿಮರ್ಶೆಗೆ ಒಳಪಡಿಸುವುದು. ಪ್ರಸ್ತುತದಲ್ಲಿ ಕಂಡದ್ದನ್ನು ಕಂಡಹಾಗೆ ಖಂಡಿಸಿ ಬರೆಯುವುದನ್ನು ಕಾಣಬಹುದು. ಹೀಗೆ ಇವರ ಸಾಹಿತ್ಯ ಪ್ರಜ್ಞೆ ವಿಸ್ತಾರಗೊಳ್ಳುವುದನ್ನು ಇವರ ಒಟ್ಟು ಸಾಹಿತ್ಯದಲ್ಲಿ ಗುರುತಿಸಬಹುದು.

ಹೀಗೆ ಅವರ ಕಾವ್ಯದ ದಿಕ್ಕು ಎಂತಹದ್ದು, ಅವರ ಸಂಸ್ಕೃತಿ ಚಿಂತನೆ ಎಂತಹದ್ದು, ಎಂಬುದರ ಹುಡುಕಾಟವೇ ಈ ಪ್ರಬಂಧದ ಮೂಲ ಉದ್ದೇಶವಾಗಿದೆ.

# ಅಧ್ಯಾಯ – ೨

## ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತಿ ಚಿಂತನೆ

### ೨.೧ : ಸಂಸ್ಕೃತಿ ಪರಿಕಲ್ಪನೆಯ ವಿವರಣೆ :–

ಕನ್ನಡದಲ್ಲಿ 'ಸಂಸ್ಕೃತಿ' ಎಂಬ ಪದದ ಪರಿಚಯ ಹಿಂದೆ ಇರಲಿಲ್ಲ. ಅದು ಹಿಂದಿನ ಯಾವ ಶಬ್ದಾರ್ಥಕೋಶದಲ್ಲಿಯೂ ದೊರೆಯಲಾರದು. ಇದಕ್ಕೆ ಉತ್ತಮ ಉದಾಹರಣೆ ಕಿಟೆಲ್‌ನ ಶಬ್ದಕೋಶ. ಅಂತೆಯೇ (೧೮೭೫ರಲ್ಲಿ) ಮೊದಲಿಗೆ ಕನ್ನಡ ಸಾಹಿತ್ಯ ಚರಿತ್ರೆ ಬರೆದು ಮೂರು ಕಾಲಘಟ್ಟಗಳನ್ನಾಗಿ ವಿಂಗಡಿಸಿದಾಗಲೂ ಈ ಪದದ ಬಳಕೆ ಇರಲಿಲ್ಲ. ಅಂದ ಮೇಲೆ ಹತ್ತೊಂಭತ್ತನೆಯ ಶತಮಾನದವರೆಗೂ ಕನ್ನಡಿಗರು ಈ ಪದವನ್ನು ಬಳಸುತ್ತಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಕಾಲಾನಂತರದಲ್ಲಿ ಡಿ.ವಿ.ಜಿ, ದೇವುಡು ಮುಂತಾದವರು ಮುಖ್ಯವಾಗಿ ಸಂಸ್ಕೃತಿ ಎಂಬ ಈ ಪದವನ್ನು ಕನ್ನಡದಲ್ಲಿ ಬಳಕೆಗೆ ತಂದರು.

ಬಹಳ ಹಿಂದಿನಿಂದಲೂ ಸಂಸ್ಕೃತಿ ಎಂದರೇನು? ಎಂದ ಕೂಡಲೇ ನೀಡುತ್ತ ಬಂದಿರುವ ವ್ಯಾಖ್ಯಾನ "ಒಂದು ಸಮುದಾಯದ ಎಲ್ಲಾ ರೀತಿಯ ಆಚಾರ–ವಿಚಾರಗಳು, ರೂಢಿ–ಸಂಪ್ರದಾಯಗಳು, ಮೌಲ್ಯಗಳು ಒಟ್ಟಾರೆಯಾಗಿ ಅವರ ಸಂಪೂರ್ಣ ಜೀವನವಿಧಾನವನ್ನೇ ಸಂಸ್ಕೃತಿ ಎಂದು ಕರೆಯಲಾಗುತ್ತಿತ್ತು". ಆದರೆ ಕನ್ನಡದ ಈ ಸಂಸ್ಕೃತಿ ಎಂಬ ಪದವು ಇಂಗ್ಲೀಷ್‌ನ 'Culture' ಎಂಬ ಪದದ ಸಂವಾದಿ ಪದ. ಈ 'Culture' ಎಂಬ ಪದವನ್ನು ಕವಿಯೂ, ವಿದ್ವಾಂಸನೂ ಆದ ಬ್ರಿಟನ್‌ನ ಮ್ಯಾಥ್ಯೂ ಆರ್ನಾಲ್ಡ್‌ನು ವಿಶೇಷವಾಗಿ ವಿವರಿಸುತ್ತಾನೆ. ಇಲ್ಲಿ 'Culture'ಅನ್ನು 'Nature' ಗೆ ವಿರುದ್ಧವಾಗಿ ಬಳಸಲ್ಪಡುವ ಪ್ರಯತ್ನ ನಡೆಯುತ್ತದೆ. ಅಂದರೆ ಮನುಷ್ಯ ನಿರ್ಮಿತವಾದದ್ದು Culture ಎಂಬುದು. ಉದಾಹರಣೆಗೆ AgriCulture ಮನುಷ್ಯ ಪ್ರಯತ್ನ ಪೂರ್ವಕವಾಗಿ ಮಾಡಿದ್ದು, ನಿಸರ್ಗದತ್ತವಾಗಿ ಬಂದದ್ದಲ್ಲ ಮನುಷ್ಯನೇ ರೂಪಿಸಿದ್ದು. ಅದೇ ರೀತಿ ಸಂಸ್ಕೃತಿಯನ್ನು ಮನುಷ್ಯನೇ ರೂಪಿಸಿಕೊಂಡದ್ದು.

ಸಂಸ್ಕೃತಿ ಎಂಬುದು ಖಚಿತ ಅಲ್ಲ, ಸಂಸ್ಥಾಪಿತವಾದದ್ದು. ಹೀಗೆ ಸಂಸ್ಥಾಪಿತಗೊಂಡ ಸಂಸ್ಕೃತಿ ಮಾನವನನ್ನು ಪ್ರಾಣಿಗಳಿಂದ ಬೇರ್ಪಡಿಸುವ ಕೆಲಸವನ್ನು ಮಾಡುತ್ತದೆ. ಇಂತಹ ಸಂಸ್ಕೃತಿಯು ಕಾಲಾಂತರದಲ್ಲಿ ಹಲವು ಬಗೆಯ ವ್ಯಾಖ್ಯಾನಗಳನ್ನು ಪಡೆದುಕೊಳ್ಳುತ್ತಾ ಬಂದಿದೆ. ಅಂತೆಯೇ ವಿದ್ವಾಂಸರ ಅಭಿಪ್ರಾಯಗಳು ಭಿನ್ನವಾಗಿರುವಂತೆಯೇ ವ್ಯಾಖ್ಯಾನಗಳು ಭಿನ್ನ ಸ್ವರೂಪವನ್ನು ಪಡೆದಿವೆ. ಅಂತಹ ಕೆಲವು ವ್ಯಾಖ್ಯಾನಗಳು ಹೀಗಿವೆ.

'ಒಂದು ಹಂತದಲ್ಲಿ ಸಮಾಜಕ್ಕೆ ಒಪ್ಪಿತವಾದ ಮೌಲ್ಯಗಳ ಒಟ್ಟು ಮೊತ್ತವೇ ಸಂಸ್ಕೃತಿ' ಎಂದು ವ್ಯಾಖ್ಯಾನಿಸಲಾಗಿತ್ತು. ಯಾವ ಮೌಲ್ಯವನ್ನು ಸಮಾಜ ಒಳ್ಳೆಯ ಮೌಲ್ಯ ಎಂದು ಭಾವಿಸುವುದೋ ಅದನ್ನು ಸಂಸ್ಕೃತಿ ಎಂದು ಪರಿಗಣಿಸಲಾಗುತ್ತದೆ. ಇದು ಒಂದು ಸಮುದಾಯ ಒಳ್ಳೆಯದೆಂದು ಭಾವಿಸಿರುವ ಮೌಲ್ಯಗಳು ಮಾತ್ರ. ಅದು ಆಚರಣೆಯಲ್ಲಿ ಇರಲಿ, ಬಿಡಲಿ, ಅಂತಹ ಮೌಲ್ಯಗಳೇ ಸಂಸ್ಕೃತಿ ಎಂದು ಅರ್ಥೈಸಿಕೊಳ್ಳಲಾಗಿತ್ತು.

ಸಂಸ್ಕೃತಿ ಎಂಬುದು ಮುಂದೆ ಕಲೆಗೆ ಸಂವಾದಿಯಾಗಿ ಬಳಸಲಾಗಿದೆ. ಇಲ್ಲಿ ಸಂಸ್ಕೃತಿ ಎಂಬುದನ್ನು ಸಾಂಸ್ಕೃತಿಕ ಎಂಬ ರೂಪಕ್ಕೆ ತಂದು ಬಳಸಲಾಗಿದೆ. ಉದಾಹರಣೆಗೆ ಸಾಂಸ್ಕೃತಿಕ ಕಲೆಗಳಾದ ನೃತ್ಯ, ಸಂಗೀತ......... ಈ ವ್ಯಾಖ್ಯಾನ ಜನಸಾಮಾನ್ಯರೆಲ್ಲರಿಗೂ ಚಿರಪರಿತವಾಗಿರುವಂತದ್ದು. ಸಾಂಸ್ಕೃತಿಕ ಚಟುವಟಿಕೆಗಳು ಎಂಬ ಪದ ಹೆಚ್ಚಾಗಿ ಬಳಕೆಯಾಗುತ್ತಿದೆ. ಮತ್ತೊಂದು ನೆಲೆಯಲ್ಲಿ ಈ ಕಲೆಯು 'ಲಿಬರಲ್ ಆರ್ಟ್ಸ್' ಎಂಬ ಪದವನ್ನು ತನ್ನೊಳಗೆ ಧರಿಸಿದೆ. ಅಂದರೆ ಸುಧಾರಣಾವಾದಿ, ಉದಾರವಾದಿ ಕಲೆ ಎಂದು ಇದನ್ನು ಸಂಸ್ಕೃತಿಯ ಚೌಕಟ್ಟಿನೊಳಗೇ ಪರಿಭಾವಿಸಲಾಗುತ್ತದೆ. "ಕನ್ನಡದ ಸಂದರ್ಭದಲ್ಲಿ ಶಿವರಾಮಕಾರಂತರು ಕಲೆಗಳ ಮೂಲಕ ಸಂಸ್ಕೃತಿಯನ್ನು ಗ್ರಹಿಸುವ ಕ್ರಮವಿದೆ. ಇದಕ್ಕೆ ನಿದರ್ಶನವೆಂಬಂತೆ ಅವರ 'ಯಕ್ಷಗಾನ ಬಯಲಾಟ' ಹಾಗೂ 'ಕಲೆ ಮತ್ತು ಸಂಸ್ಕೃತಿ', 'ಸಂಸ್ಕೃತಿಯ ಕೆನೆಯಾಗಿ ಕಲೆ' ಮುಂತಾದ ಅವರ ಲೇಖನಗಳ ಹೆಸರಗಳು ಇದಕ್ಕೆ ಪೂರಕವಾಗಿದೆ"[7]

ಮಾನವಶಾಸ್ತ್ರಜ್ಞರ ಪ್ರಕಾರ, "ಒಂದು ಸಮುದಾಯದ ಎಲ್ಲಾ ರೀತಿಯ ಆಚಾರವಿಚಾರಗಳು, ರೂಢಿ-ಸಂಪ್ರದಾಯಗಳು, ಮೌಲ್ಯಗಳು ಒಟ್ಟಾರೆಯಾಗಿ ಅವರ ಸಂಪೂರ್ಣ ಜೀವನ ವಿಧಾನವನ್ನೇ ಸಂಸ್ಕೃತಿ ಎಂದು ವ್ಯಾಖ್ಯಾನಿಸುತ್ತಾರೆ. ಈ ವ್ಯಾಖ್ಯಾನದ ಪ್ರಕಾರ ಸಂಸ್ಕೃತಿ ಎಂದರೆ ಒಳ್ಳೆಯದು, ಕೆಟ್ಟದ್ದು ಎಂಬುದಕ್ಕೆ ಪ್ರಾಧಾನ್ಯವಿಲ್ಲ. ಒಟ್ಟಾರೆ ಜನರ ಜೀವನ ವಿಧಾನ.

ಉದಾ:-ಎಂ.ಎನ್.ಶ್ರೀನಿವಾಸ್‌ರವರು ಕೊಡವ ಜನಾಂಗದ ಜೀವನ ವಿಧಾನವನ್ನು ಅಧ್ಯಯನ ಮಾಡಿದ್ದು, ಅವರ ಸಂಸ್ಕೃತಿ ಅಧ್ಯಯನವೇ'A rememberd Village' –('ನೆನಪಿಸಿಕೊಂಡ ಹಳ್ಳಿ') ಎಂದಾಗಿದೆ.

ಸಂಸ್ಕೃತಿ ಚಿಂತಕರಲ್ಲಿ ಬಹಳ ಮುಖ್ಯವಾಗಿ ಹೇಳಲೇಬೇಕಾದ ಹೆಸರು 'ಮ್ಯಾಥ್ಯೂ ಆರ್ನಾಲ್ಡ್'ನದು. ಹತ್ತೊಂಬತ್ತನೆಯ ಶತಮಾನದ ಹೊತ್ತಿಗೆ ಯುರೋಪಿನಲ್ಲಿ ಸಂಸ್ಕೃತಿಪರ ಚಿಂತಕರ ನೇತೃತ್ವದಲ್ಲಿ 'What is culture?' ಎಂಬ ವಾದ ಪ್ರಾರಂಭವಾಗಿತ್ತು. ಮ್ಯಾಥ್ಯೂಆರ್ನಾಲ್ಡ್ ಒಬ್ಬ ನೈತಿಕ ಆದರ್ಶವಾದಿ ಸಂಸ್ಕೃತಿ ಚಿಂತಕ. ಇವನು ಸಂಸ್ಕೃತಿಯನ್ನು ಹೀಗೆ ವ್ಯಾಖ್ಯಾನಿಸುತ್ತಾನೆ. "Culture being a pursuit of our total perfection by means of getting to know, on all matters which most concern us the best which has been

thought and said in the world"[2] ಅಂದರೆ, "ಪರಿಪೂರ್ಣತೆಯ ಸಿದ್ಧಿಗಾಗಿ ಮನುಷ್ಯ ನಡೆಸುವ ಪ್ರಯತ್ನವೇ ಸಂಸ್ಕೃತಿ ಇದು ವ್ಯಕ್ತಿಯ ಸ್ವರೂಪಕ್ಕೆ ಸಂಸ್ಕಾರವನ್ನು ನೀಡುವಂತದ್ದು" ಎನ್ನುತ್ತಾನೆ.

ಸಂಸ್ಕೃತಿ ಇಲ್ಲಿ ನೈತಿಕ ಚೌಕಟ್ಟು ಎಂಬರ್ಥದಲ್ಲಿ ಬಳಸಲ್ಪಟ್ಟಿದೆ. ಮನುಷ್ಯ ತನ್ನ ಸಮಾಜದಲ್ಲಿ ತಂತಾನೇ ಕೆಲವು ನಿಯಮಗಳನ್ನು ಮಾಡಿಕೊಳ್ಳುವುದು, ಆಸೆ, ಆಮಿಷಗಳಿಗೆ ನೈತಿಕತೆಯ ಚೌಕಟ್ಟನ್ನು ಹಾಕಿಕೊಂಡು ತಮ್ಮ ಮೂಲಭೂತ ಪ್ರವೃತ್ತಿಗಳನ್ನು ಸಂಸ್ಕರಿಕೊಳ್ಳುವುದನ್ನೇ ಸಂಸ್ಕೃತಿ ಎಂದು ಅರ್ಥೈಸಲಾಗಿದೆ.

ರಹಮತ್ ತರೀಕೆರೆಯವರು "ಸಂಸ್ಕೃತಿ ಹಾಗೆಂದರೇನು?" ಎನ್ನುವ ತಮ್ಮ ಲೇಖನದಲ್ಲಿ ಮ್ಯಾಥ್ಯೂ ಆರ್ನಾಲ್ಡರ ಸಂಸ್ಕೃತಿ ಚಿಂತನೆ ಬಗ್ಗೆ ಚರ್ಚಿಸುತ್ತಾ, "ಕನ್ನಡದ ಹೆಚ್ಚಿನ ಸಂಸ್ಕೃತಿ ಚಿಂತಕರು ೧೯ನೇ ಶತಮಾನದ ಸಂಸ್ಕೃತಿ ಚಿಂತಕನಾದ ಮ್ಯಾಥ್ಯೂಆರ್ನಾಲ್ಡನನ್ನು ಉಲ್ಲೇಖಿಸುತ್ತಾರೆ. ವಿಶೇಷವಾಗಿ ಡಿ.ವಿ.ಜಿ ಹಾಗೂ ಮಾಸ್ತಿಯವರು ತಮ್ಮ ಶಿಷ್ಯರನ್ನು ಸೇರಿಸಿಕೊಂಡು ಚರ್ಚಿಸುತ್ತಿದ್ದ ಕೃತಿಗಳ ಪಟ್ಟಿಯನ್ನು ವಿಸೀ ಅವರು ಒಂದೆಡೆ ಕೊಡುತ್ತಾರೆ. ಅದರಲ್ಲಿ ಆರ್ನಾಲ್ಡನ 'ಕಲ್ಚರ್ ಅಂಡ್ ಅನಾರ್ಕಿ'ಯೂ ಸೇರಿದೆ. 'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ತಾನು "ಮೂಢ" ಎಂದು ಭಾವಿಸಿದ ಜನರಿಗೆ ಸುಸಂಸ್ಕೃತಿಯನ್ನು ಕೊಡುವ ಉದ್ದೇಶವುಳ್ಳ ಹೂವಯ್ಯನು, ಅಟ್ಟದ ಮೇಲೆ ಕುಳಿತು ಓದುವುದು ಮ್ಯಾಥ್ಯೂ ಆರ್ನಾಲ್ಡನನ್ನು! ೧೯ನೇ ಶತಮಾನದ ಕವಿಯೂ ಚಿಂತಕನೂ ಆದ ಆರ್ನಾಲ್ಡನು ಕನ್ನಡ ಸಂಸ್ಕೃತಿ ಚಿಂತಕರ ಮೇಲೆ ತುಂಬ ಪ್ರಭಾವ ಬೀರಿದನು, ಈತ ಸಂಸ್ಕೃತಿಗೆ ಶಿಷ್ಟವಾದಿ(ಎಲೈಟ್), ಗುಣಗ್ರಾಹಿ, ವರ್ಗವಾದಿ (ಸೆಕ್ಟೆರಿಯನ್) ವ್ಯಾಖ್ಯಾನವನ್ನು ಕೊಟ್ಟವನು. ಈ ವ್ಯಾಖ್ಯೆಯು ಉಚ್ಚ ಸಾಮಾಜಿಕ ವರ್ಗದಿಂದ ಬಂದ ಬಹುತೇಕ ಭಾರತೀಯ ಚಿಂತಕರಿಗೆ ಪ್ರಿಯವಾಯಿತು. ಇದರಿಂದ ಕೆಲವರು ಜಾತಿಪದ್ಧತಿಯನ್ನು ಸಮರ್ಥನೆ ಮಾಡಲು ಕೂಡ ಬಳಸಿಕೊಂಡರು. ಆದರೆ ಈ ಸಂಸ್ಕೃತಿ ವ್ಯಾಖ್ಯೆಯೂ ೧೯೭೦ರ ದಶಕದ ನಂತರ ಕರ್ನಾಟಕದಲ್ಲಾದ ಬೆಳವಣಿಗೆಗಳಲ್ಲಿ ಹಿಂಜರಿಕೆಗೆ ಒಳಗಾಯಿತು. "ಸಂಸ್ಕೃತಿ ಎಂದರೆ ಒಂದು ಸಮುದಾಯದ ಸಮಗ್ರ ಜೀವನ ವಿಧಾನ; ಇದರಲ್ಲಿ ಕೇಡು, ಒಳಿತು, ಮೇಲು, ಕೀಳು ಎಂಬ ತರತಮವಿಲ್ಲ ಎಂಬ ವ್ಯಾಖ್ಯೆ ಹೆಚ್ಚು ಬಳಕೆಯಾಗತೊಡಗಿತು"[3] ಎನ್ನುತ್ತಾರೆ.

ಆನಂತರ ಬಂದ ಕವಿಗಳಿಗೆ ಪ್ರಮುಖವಾಗಿ ಪ್ರೇರಣೆ ನೀಡಿದ ಕವಿ ಟಿ.ಎಸ್.ಎಲಿಯಟ್. ಈತನೇ ಸಂಸ್ಕೃತಿಯನ್ನು ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಸಮಗ್ರ ಜೀವನವಿಧಾನವೆಂದು ವ್ಯಾಖ್ಯಾನಿಸುವವನು. ಈತ ಆರ್ನಾಲ್ಡನ ಚಿಂತನೆಗೆ ವಿರುದ್ಧವಾದ ಚಿಂತನೆಯನ್ನು ಮಂಡಿಸುತ್ತಾನೆ. ಇಂತಹ ಎಲಿಯಟ್‌ನಿಂದ ಪ್ರಭಾವಿತನಾದ ಹಲವು ಕನ್ನಡ

ಸಾಹಿತಿಗಳು ಸಂಸ್ಕೃತಿಯನ್ನು, ಪರಂಪರೆಯನ್ನು ತನ್ನ ವ್ಯಕ್ತಿತ್ವದ ನೆಲೆಯಿಂದ ಶೋಧಿಸುವ ವಿಮರ್ಶಿಸುವ ಹಾಗೂ ಬೆಲೆಕಟ್ಟುವ ಮನೋಧರ್ಮ ಎಪ್ಪತ್ತರ ದಶಕದಲ್ಲಿ ಪ್ರಕಟವಾಯಿತು. ಅಂದರೆ ತಮ್ಮ ಪ್ರಜ್ಞೆ ಮತ್ತು ಪರಿಸರಗಳ ನಡುವಣ ಸಂಬಂಧವನ್ನು ಪರೀಕ್ಷಿಸುವುದರ ಮೂಲಕ ಸಂಸ್ಕೃತಿಯನ್ನು ಅರ್ಥೈಸಿಕೊಳ್ಳಲಾಯಿತು. ಇಲ್ಲಿ ವ್ಯಕ್ತಿಪ್ರಜ್ಞೆಯ ಮೂಲಕ ಸಮಾಜವನ್ನು ನೋಡಲಾಯಿತು. ಆ ರೀತಿ ನೋಡಿದವರಲ್ಲಿ ಅಡಿಗ, ಅನಂತಮೂರ್ತಿಯವರನ್ನು ಗುರುತಿಸಬಹುದು.

ಈ ಮೇಲಿನ ವ್ಯಾಖ್ಯಾನಗಳು ಹಲವು ವಿದ್ವಾಂಸರ, ಮತ್ತಿತರ ಅಧ್ಯಯನ ಕ್ಷೇತ್ರಗಳ ಪ್ರಕಾರ ರೂಪುಗೊಂಡವು. ಆದರೆ ಸಂಸ್ಕೃತಿ ಇವಿಷ್ಟಕ್ಕೆ ಸೀಮಿತವಲ್ಲ. ಕಾಲಬದಲಾದಂತೆ ಸಂಸ್ಕೃತಿಯ ಅರ್ಥವೂ ಬದಲಾಗುತ್ತಾ ಬಂದಿದೆ. ಇಂದು ಈ ಸಂಸ್ಕೃತಿ ಅರ್ಥವನ್ನು ರೂಪಿಸುವ ಕ್ರಮವಾಗಿ ಬೆಳೆದುಬಂದಿದೆ. ಇಲ್ಲಿ ಅರ್ಥ ಎಂದರೆ ಜ್ಞಾನ ಎಂಬುದು. ಹೀಗೆ ಅರ್ಥೈಸುವ ಕ್ರಮ ಭಿನ್ನ ಭಿನ್ನವಾಗಿರುತ್ತದೆ. ಆದ್ದರಿಂದಲೇ ಸಂಸ್ಕೃತಿ ಎಂದರೆ "ಅರ್ಥವನ್ನು ರೂಪಿಸುವ, ಬದಲಾಯಿಸುವ ವ್ಯವಸ್ಥೆ" ಎಂದು ಕರೆಯಲಾಗಿದೆ. ಉದಾಹರಣೆಗೆ: ಬಟ್ಟೆ ಹಾಕಿಕೊಳ್ಳುವುದು ಹಿಂದೆ ಸಂಸ್ಕೃತಿ. ಆದರೆ ಇಂದು ಯಾವ ಬಟ್ಟೆಯನ್ನು ಹಾಕಿಕೊಂಡರೆ ಯಾವ ಅರ್ಥಬರುತ್ತದೆ ಎಂಬ ಅರ್ಥವ್ಯವಸ್ಥೆಯೇ ಸಂಸ್ಕೃತಿ. ಅದೇ ರೀತಿ ಯಾವಾಗ ಹೇಗಿರಬೇಕು ಎಂಬುದನ್ನು ನಿರ್ದೇಶಿಸುವುದು ಸಂಸ್ಕೃತಿ.

ಉದಾ: ಚಿಕ್ಕವರಿಗೆ ನಮಸ್ತೆ ಹೇಳುವುದು – ವ್ಯಂಗ್ಯ

ದೊಡ್ಡವರಿಗೆ ನಮಸ್ತೆ ಹೇಳುವುದು – ಗೌರವ

ಇಲ್ಲಿ ಕ್ರಿಯೆ ಒಂದೇ. ಆದರೆ ಆ ಕ್ರಿಯೆ ಕೊಡುವ ಅರ್ಥ ಬೇರೆ ಬೇರೆ ಇಂತಹ ಅರ್ಥವ್ಯವಸ್ಥೆಯೇ ಸಂಸ್ಕೃತಿ. ಹೀಗೆ ಸಂಸ್ಕೃತಿ ಎಂಬುದು ನಿರ್ದಿಷ್ಟ ವ್ಯಾಖ್ಯಾನವನ್ನು ಪಡೆದಿಲ್ಲ. ಅದರ ವ್ಯಾಖ್ಯಾನ, ಅರ್ಥ ಸ್ವರೂಪಗಳು ನಿರಂತರವಾಗಿ ಬದಲಾಗುತ್ತಲೇ ಇರುತ್ತದೆ. ಆಯಾ ಸಂದರ್ಭಕ್ಕೆ ಸೂಕ್ತವಾಗುವ ವ್ಯಾಖ್ಯಾನವನ್ನು ಅಲ್ಲಲ್ಲಿ ಬಳಸಬಹುದಾಗಿದೆ. ಸಂಸ್ಕೃತಿ ಎಂದರೆ ಸದ್ಯಕ್ಕೆ ಈ ಕೆಳಕಂಡಂತೆ ಅರ್ಥಕೊಟ್ಟು ಬಳಸುತ್ತಿದ್ದಾರೆ.

ಅ. "ಸಂಸ್ಕೃತಿ ಎಂಬುದು ಒಂದು ಸಮುದಾಯ ಬದುಕುವ, ಆಲೋಚಿಸುವ ಸಮಸ್ತ ಆಯಾಮಗಳನ್ನು ಒಳಗೊಳ್ಳುವ ಒಂದು ಪರಿಭಾಷೆ

ಆ. 'ಸಮುದಾಯ' ಎಂದಾಗ ಒಂದು ಗುಂಪಲ್ಲ. ಹಲವಾರು ಗುಂಪುಗಳಿರುತ್ತವೆ. ಈ ಎಲ್ಲ ಗುಂಪುಗಳ ನಂಬಿಕೆ, ಆಚರಣೆಗಳೂ ಒಟ್ಟು ಸೇರಿಯೇ ಅದರ ಸಂಸ್ಕೃತಿ.

ಇ. ಇದೇ ರೀತಿ ಇಡೀ ನಾಡಿಗೆ ಏಕರೂಪಿಯಾದ ಒಂದು ಸಂಸ್ಕೃತಿ ಇರುವುದಿಲ್ಲ. ಅದರೊಳಗೆ ಪ್ರಾದೇಶಿಕ, ಜಾತೀಯ, ಧಾರ್ಮಿಕ, ಬುಡಕಟ್ಟಿನ ರೂಪಗಳಿರುತ್ತವೆ. ಭಾರತದಂತಹ ದೇಶದಲ್ಲಿ ಇದು ಸಹಜ. ಇದನ್ನು ಸಂಸ್ಕೃತಿಯ ಬಹುರೂಪಿ ಗುಣ ಎನ್ನಬಹುದು.

ಈ. ನಾಡಿನ ಈ ಬಹುರೂಪಿ ಸಂಸ್ಕೃತಿಗಳ ಒಳಗೆ ಬಹುಕಾಲದಿಂದಲೂ ಕೊಡುಕೊಳು ನಡೆಯುತ್ತ ಬಂದಿದೆ. ನಾಡಿನ ಒಳಗಿನಿಂದ ಮಾತ್ರವಲ್ಲ. ಹೊರಗಿಂದಲೂ ಕೊಡುಕೊಳು ನಡೆದಿವೆ. ಈ ಕೊಡುಕೊಡೆಗಳಿಗೆ ಅನೇಕ ಚಾರಿತ್ರಿಕ ಕಾರಣಗಳಿವೆ. ಸಾಮಾಜಿಕ, ರಾಜಕೀಯ, ಆರ್ಥಿಕವಾದ ಚಲನೆಗಳು ಕಾರಣವಾಗಿವೆ. ಆದ್ದರಿಂದ 'ಶುದ್ಧ', 'ಮೂಲ' ಸಂಸ್ಕೃತಿ ಎಂಬುದು ಇರಲು ಸಾಧ್ಯವಿಲ್ಲ. ಸಂಸ್ಕೃತಿಯು ಸದಾ ಸಂಕರರೂಪಿ. ಈ ಸಂಕರವು ಅದರ ಚಲನಶೀಲತೆಯ ಸಂಕೇತ. ಇದನ್ನು ಸಾಂಸ್ಕೃತಿಕ ಬಹುತ್ವ ಎಂದು ಕರೆಯಬಹುದು.

ಉ. ಸಂಸ್ಕೃತಿ ಎಂಬುದು ಹಿಂದೆ ಹಿರೀಕರು ಕಟ್ಟಿಟ್ಟುಹೋದ ಬುತ್ತಿಯಲ್ಲ. ಅದು ಉದ್ದಕ್ಕೂ ಬದಲಾಗುತ್ತ ಬಂದಿದ್ದು, ನಮ್ಮ ಕಾಲದಲ್ಲಿ ಒಂದು ರೂಪದಲ್ಲಿ ಅಸ್ತಿತ್ವದಲ್ಲಿದೆ. ನಮ್ಮ ಬದುಕಿನಂತೆ ಅಥವಾ ಸಮಾಜದಂತೆ ಇದು ಕೂಡ ಚಲನಶೀಲ. ಇದನ್ನು ಕೆಡದಂತೆ ರಕ್ಷಿಸಿಕೊಂಡು ಬರುವುದು ಸಾಧ್ಯವಿಲ್ಲ. ಇದಕ್ಕೆ ಪ್ರತಿತಲೆಮಾರು ಕೂಡ ತನ್ನದನ್ನು ಕೂಡಿಸಿ ರೂಪಾಂತರ ಮಾಡುತ್ತ ಹೋಗುತ್ತದೆ.

ಊ. ಸಂಸ್ಕೃತಿಯಲ್ಲಿ ತರತಮ ಎಂಬುದಿಲ್ಲ. ನೈತಿಕವಾಗಿ ಕೆಟ್ಟ – ಒಳ್ಳೆಯ, ವಿಕಾಸದ ದೃಷ್ಟಿಯಿಂದ ಹಿಂದುಳಿದ – ಮುಂದುವರೆದ, ಶ್ರೇಣೀಕರಣದ ನೆಲೆಯಿಂದ ಮೇಲು-ಕೀಳು ಎಂಬ ಪರಿಭಾಷೆಯಲ್ಲಿ ಇದನ್ನು ಅಳೆಯಲು ಸಾಧ್ಯವಿಲ್ಲ. ಸಮುದಾಯಗಳ ಎಲ್ಲ ಬಗೆಯ ನಂಬಿಕೆ, ಆಚರಣೆಗಳನ್ನು ಸಂಸ್ಕೃತಿ ಎಂದು ಒಪ್ಪಿಕೊಳ್ಳಬೇಕು.

ಎ. ಸಂಸ್ಕೃತಿ ಪರಿಕಲ್ಪನೆ ಮೂಲತಃ ಒಂದು ರಾಜಕೀಯ, ಆರ್ಥಿಕ, ಸಾಮಾಜಿಕವಾದ ಲೋಕದೃಷ್ಟಿಯನ್ನು ಸೂಚಿಸುವ ಸೈದ್ಧಾಂತಿಕ ಪರಿಭಾಷೆ ಅದನ್ನು ಧಾರ್ಮಿಕವಾಗಿ ಪವಿತ್ರವೆಂಬ ಭಾವನೆಯಲ್ಲಿ ಬಳಸುವಾಗಲೂ ಅದು ನಿರ್ದಿಷ್ಟ ರಾಜಕೀಯ, ಆರ್ಥಿಕ, ಸಾಮಾಜಿಕ ಚಿಂತನೆಯನ್ನು ಒಳಗೊಂಡಿರುತ್ತದೆ. ಆದ್ದರಿಂದ ಸಂಸ್ಕೃತಿಯು ರಾಜಕಾರಣದ ಗುಪ್ತಭಾಷೆ. ಇಲ್ಲಿ ರಾಜಕಾರಣ ಎಂದರೆ ಸಾಮಾಜಿಕ ಆರ್ಥಿಕವಾದ ತಾತ್ವಿಕತೆಯಾಗಿದೆ"

ಹೀಗೆ. ಸಂಸ್ಕೃತಿಯ ಅರ್ಥ ಸಂದರ್ಭಕ್ಕೆ ತಕ್ಕ ಹಾಗೆ ಬದಲಾಗುತ್ತಿರುತ್ತದೆ. ಕಾಲ ಬದಲಾದಂತೆ ಸಂಸ್ಕೃತಿಯ ಅರ್ಥವೂ ಬದಲಾಗುತ್ತಾ, ಸಂಸ್ಕೃತಿ ಪದವು ಹಲವು ಪದಗಳನ್ನು ತನ್ನೊಡಲಲ್ಲಿ ಧರಿಸುತ್ತಾ ಹೊಸ ಹೊಸ ಪರಿಭಾಷೆಗಳನ್ನು ಹುಟ್ಟುಹಾಕಿರುವುದನ್ನು ಕಾಣಬಹುದು.

ಉದಾ: ಕೊಳ್ಳುಬಾಕ ಸಂಸ್ಕೃತಿ, ಗೂಂಡಾಸಂಸ್ಕೃತಿ, ರಾಜಕೀಯ ಸಂಸ್ಕೃತಿ, ಬೊಗಳೆ ಸಂಸ್ಕೃತಿ, ಪರ್ಯಾಯ ಸಂಸ್ಕೃತಿ, ಪ್ರತಿಸಂಸ್ಕೃತಿ ಹೀಗೆ ಹತ್ತು ಹಲವು ಪರಿಭಾಷೆಯನ್ನು ಹುಟ್ಟುಹಾಕುವುದರ ಮೂಲಕ ಸಂಸ್ಕೃತಿ ಪದವನ್ನು ವ್ಯಾಪಕವಾಗಿ ಬಳಕೆ ಮಾಡಲಾಗುತ್ತಿದೆ.

## ೨.೨ ಅಡಿಗ, ಅನಂತಮೂರ್ತಿರವರ ಸಾಹಿತ್ಯದಲ್ಲಿ ಸಂಸ್ಕೃತಿ ಚಿಂತನೆ :-

ಪ್ರಸ್ತುತ ಲೇಖನವು ಅಡಿಗ ಹಾಗೂ ಅನಂತಮೂರ್ತಿಯವರು ತಮ್ಮ ಸಾಹಿತ್ಯದಲ್ಲಿ ಸಂಸ್ಕೃತಿಯನ್ನು ಗ್ರಹಿಸಿರುವ ಕ್ರಮವನ್ನು ಕುರಿತದ್ದಾಗಿದೆ. ಅಡಿಗರ ಕಾವ್ಯವನ್ನು ನೋಡುವುದಾದರೆ, ಒಂದು ಕಡೆ ಸಂಸ್ಕೃತಿಯ ನಾಶ ಮತ್ತೊಂದು ಕಡೆ ಹೊಸ ಸಂಸ್ಕೃತಿಯೊಂದರ ಹುಟ್ಟನ್ನು ಹೇಳುತ್ತದೆ. ಸತ್ವಹೀನ ಸಂಸ್ಕೃತಿಯನ್ನು ತಿರಸ್ಕರಿಸಿ ಹೊಸ ಸಂಸ್ಕೃತಿಯಿಂದ ಮಾತ್ರ ವಿಕಾಸ ಸಾಧ್ಯ ಎಂಬುದನ್ನು ಅವರ ಕಾವ್ಯ ಸ್ಪಷ್ಟಪಡಿಸುತ್ತದೆ. ಅವರ ಪ್ರಾರಂಭದ ಕವಿತೆಗಳಲ್ಲಿ ಒಂದಾದ 'ಕಟ್ಟುವೆವು ನಾವು' ಕವಿತೆಯನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ.

**"ಕಟ್ಟುವೆವು ನಾವು ಹೊಸ ನಾಡೊಂದನು ರಸದ**
**ಬೀಡೊಂದನು**
**ಹೊಸನೆತ್ತರುಕ್ಕುಕ್ಕಿ ಆರಿಹೋಗುವ ಮುನ್ನ**
**ಹರೆಯದೀ ಮಾಂತ್ರಿಕನ ಮಾಟ ಮಸುಳುವ ಮುನ್ನ,**
**ಉತ್ಸಾಹಸಾಹಸದ ಉತ್ತುಂಗ ವೀಚಿಗಳ**
**ಈ ಕ್ಷುಬ್ಧ ಸಾಗರವು ಬತ್ತಿ ಹೋಗುವ ಮುನ್ನ**
**ಕಟ್ಟುವೆವು ನಾವು ಹೊಸನಾಡೊಂದನು!'"**

ಕಟ್ಟುವೆವು ನಾವು ಹೊಸ ನಾಡೊಂದನು ಎಂಬ ಅಡಿಗರ ಮಾತಲ್ಲೇ ಹೊಸ ಸಂಸ್ಕೃತಿಯ ಹುಟ್ಟು ಕಣ್ಣುಮುಂದೆ ನಿಲ್ಲುತ್ತದೆ. ಹಿಂದಿನಿಂತ ರೂಢಿಯಾಗಿ ಬಂದಂತಹ ಸಂಪ್ರದಾಯ, ಜಾತಿ, ಮೂಢನಂಬಿಕೆಗಳನ್ನು ನಿರ್ಮೂಲನೆ ಮಾಡಿ ಇದರಿಂದ ಶೋಷಣೆಗೆ ಒಳಗಾಗುತ್ತಿರುವ ಹಲವು ಜನಪರ ಬಂಡಾಯವೆದ್ದು ಹೊಸ ಸಂಸ್ಕೃತಿ ಕಟ್ಟುವ ಕಲ್ಪನೆಯನ್ನು ಕಾಣಬಹುದು. ಜೊತೆಗೆ ಜಡಸಮಾಜದಲ್ಲಿರುವ ಅನೇಕ ಕಟ್ಟುಪಾಡುಗಳನ್ನು ವಿರೋಧಿಸುತ್ತಾ, ಅರ್ಥರಹಿತ ಸಂಪ್ರದಾಯವನ್ನು, ಅದರ ಪ್ರತಿಬಿಂಬದಂತಿರುವ ಪುರೋಹಿತಶಾಹಿ ವ್ಯವಸ್ಥೆಯನ್ನು ಟೀಕಿಸಲಾಗುತ್ತಿದೆ. ಇಲ್ಲಿ ಅಡಿಗರ ಕಾವ್ಯ ಒಂದು ಸಂಸ್ಕೃತಿಯ ಅವನತಿಯಲ್ಲಿರುವುದನ್ನು ಹೇಳುವುದರ ಜೊತೆಗೆ ಆ ಸಂಸ್ಕೃತಿಯನ್ನು ವಿರೋಧಿಸಿ ಪರ್ಯಾಯ ಸಂಸ್ಕೃತಿಯನ್ನು ಕಟ್ಟುವ ಹಂಬಲದಲ್ಲಿದೆ. ಇಲ್ಲಿ ಉತ್ತಮ ಸಮಾಜವನ್ನು ಮನುಷ್ಯ ಕಟ್ಟಬಲ್ಲ ಎಂಬ ಕಲ್ಪನೆಯಿದೆ. ಸಮಾಜ ಹಾಗು ವ್ಯಕ್ತಿಯು ಸಂಧಿಸುವಲ್ಲಿ ಸಂಸ್ಕೃತಿ ಅರಳಬೇಕು ಎನ್ನುವ ಮಾತು ಇಲ್ಲಿ ಸ್ಪಷ್ಟ. ಕಟ್ಟುವೆವು ನಾವು ಕವನ ಒಂದು ಜನಾಂಗದ ನವಸಮಾಜ ನಿರ್ಮಾಣದ ಬಗ್ಗೆ ಹೇಳುತ್ತಿದೆ.

ಆನಂತರ ಬರೆದ ಕವನಗಳಾದ 'ಹಿಮಗಿರಿಯ ಕಂದರ', 'ಮೂಲಕ ಮಹಾಶಯರು'' ಕವನದಲ್ಲಿ ಆಧುನಿಕತೆ ತಂದೊಡಿದ್ದ ಜಂಜಾಟದಲ್ಲಿ ನರಳುವ ವ್ಯಕ್ತಿಯ ಚಿತ್ರಣ ಕಾಣಬಹುದು. ಹಿಮಗಿರಿಯ ಕಂದರದಲ್ಲಿ ಬರುವ ನಾಯಕನೊಬ್ಬ ಸಾಮಾನ್ಯ ಗುಮಾಸ್ತ. ಆಫೀಸ್ ಕೆಲಸದಲ್ಲಿ ಮುಳುಗಿಹೋಗಿದ್ದಾನೆ. ಕವಿತೆ ಹೀಗೆ ಪ್ರಾರಂಭವಾಗುತ್ತದೆ.

**ಹೊಗೆ, ಬೆಂಕಿ**
**ಅಯ್ಯೋ ಹಾಳಾಗ**
**ಉರಿ, ಶೆಖೆ, ತಾಪ;**
**ಹೊರಗೆ ರಣರಣ ಬಿಸಿಲು, ಒಳಗೆ ಮಾರಣ ಬೆಂಕಿ**
**ಮಲಗಿತ್ತು ಮನಚಿತೆಯ ಮೇಲೆ ಆಫೀಸಿನಲಿ'**[1]

ಹೀಗೆ ಹಿಮಗಿರಿಯ ಕಂದರ ಕವಿತೆ ನಾಟಕೀಯವಾಗಿ ಆರಂಭವಾಗುತ್ತದೆ. ಮೊದಲ ಸಾಲಿನಲ್ಲಿ ಕಂಡ ಬೆಂಕಿಯ ಪ್ರತಿಮೆ ವಿಪರೀತ ಬಿಸಿಲಾಗಿ, ಕೊಲ್ಲುವ ಬೆಂಕಿಯಾಗಿ ಮಾರ್ಪಡುತ್ತದೆ. ಇಲ್ಲಿ ಆಫೀಸು ಎನ್ನುವ ಪದ ಇಡೀ ನಗರದ ವಾತಾವರಣವನ್ನು ಸೃಷ್ಟಿಮಾಡುತ್ತದೆ. ಇಲ್ಲಿ ನಾಯಕನಿಗೆ ನಗರದ ಜೀವನ ಯಾಂತ್ರಿಕಬದುಕು ಸಾಕಾಗಿ ಹೋಗಿದೆ. ಆತ ಇವೆಲ್ಲವನ್ನು ತೊರೆದು ಎಲ್ಲಿಯಾದರೂ ಹೋಗಬೇಕೆಂದು ಯೋಚಿಸುತ್ತಿದ್ದಾನೆ. ಇಲ್ಲಿ ಕಾಣಿಸುವ ಹೊಗೆ ಮತ್ತು ಬೆಂಕಿ ತಪೋವನಗಳ ಯಾಗ, ಧೂಮ, ಹೋಮಾಗ್ನಿಯಲ್ಲ ಇದು ನಗರಗಳ ಫ್ಯಾಕ್ಟರಿಗಳ ಸಿಗರೇಟಿನ ಹೊಗೆ ಮತ್ತು ಬಿಸಿಲಿನ ಬೆಂಕಿ ಹೀಗೆ ಕವಿತೆ ಮುಂದುವರೆದು ಆಫೀಸ್ ಚಿತ್ರಣವನ್ನು ನೀಡುತ್ತದೆ.

**"ಯುಗಯುಗದ ಫೈಲುಫೈಲನು ಹೇರಿದ ಕಪಾಟು**
**ಕುಸಿದು ಬೆನ್ನೆಲುಬು ಕಿರುಗುಟ್ಟುತ್ತಿತ್ತು**
**ಖಟ್ಟ ಖಟ ನಿಟನಿಟಲ್**
**ಬೊಂಬೊ? ಮೂಳೆಯ ಗಂಟೊ?**
---------------------------
**ಆಫೀಸು ಬೇಡ, ಹೊರಡುವೆ, ಹೊರಟೆ ಈ ಕ್ಷಣವೆ**
**ಎಲ್ಲಿಗೇತಕೆ? ಬೇಡ ಬೇಡ!**
**ಬೇಕು ತಂಪು, ತಂಪು"**[2]

ಆಫೀಸಿನ ಹೊರೆಯನ್ನು ಹೊರುವುದರ ಜೊತೆಗೆ ಅವನೇ ಸುಟ್ಟುಹೋಗುತ್ತಿದ್ದಾನೋ ಎಂದು ಅವನಿಗೆ ಅನಿಸತೊಡಗಿದೆ. ಆತನಿಗೆ ಈ ಜಂಜಾಟದಿಂದ ಎಲ್ಲಿಯಾದರೂ ಓಡಿಹೋಗಬೇಕು ಎಂದೆನಿಸುತ್ತದೆ. ಆಧುನಿಕತೆಗೆ ಒಳಗಾಗಿರುವ ಮನುಷ್ಯನ ಮನಸ್ಸಿನ ದ್ವಂದ್ವವನ್ನು ಸಂಕಟವನ್ನು ಚಿತ್ರಿಸಲಾಗಿದ್ದು,

ಯಾಂತ್ರಿಕ ಬದುಕನ್ನು ಮೀರುವ ಯತ್ನ, ಅದರ ವಿಫಲತೆಯನ್ನು ಕಾಣಬಹುದು. ಅಷ್ಟೇ ಅಲ್ಲ ಈ ಕವನವು ಜಾಗತೀಕರಣ ತಂದೊಡ್ಡಿದ್ದ ಭೋಗಸಂಸ್ಕೃತಿಯನ್ನು ತರಾಟೆಗೆ ತೆಗೆದುಕೊಳ್ಳುತ್ತದೆ. 'ಕಾಲನಿಟ್ಟಲಲ್ಲಿ ಕೀಲುಕುದುರೆ ಸವಾರಿ, ಕೈ ಚಾಚಿದಲೆಲ್ಲ ಸ್ವಿಚ್ಚು, ಸ್ವಿಚ್ಚು; ಎಲ್ಲಿ ತಿರುಗಿದರಲ್ಲಿ ಅಮೃತ ಸೂಸುವ ನಲ್ಲಿ ಈ ಕಚೇರಿಗೆ ಮನೆಗೆ ಬೆಂಕಿ ಹಚ್ಚು' ಎನ್ನುವಲ್ಲಿ ಕಾಣಬಹುದು. ಹೀಗೆ ಜಾಗತೀಕರಣದ ಪ್ರಭಾವಕ್ಕೆ ಒಳಗಾದ ಸಾಮಾನ್ಯ ಮನುಷ್ಯನ ಚಿತ್ರಣವನ್ನು ಕಾಣಬಹುದು.

'ಮೂಲಕ ಮಹಾಶಯರು' ಕವಿತೆಯಲ್ಲೂ ಭೋಗಸಂಸ್ಕೃತಿಗೆ ಒಳಗಾದ ಮಧ್ಯಮವರ್ಗದವರ ಚಿತ್ರಣವಿದೆ. ಕವನ ಹೀಗೆ ವರ್ಣಿಸುತ್ತದೆ. "ಮೊದಲನೇಯ ತಾರೀಖು ತರುವ ಸಂಬಳದ ಚಿಂತೆ; ಅದು ಸಾಲದ ಚಿಂತೆ, ಸಾಲದ ಚಿಂತೆ, ದೊರೆಯಬಹುದಾದ ಬಡ್ತಿಯ ಚಿಂತೆ; ಹೆಂಡತಿಗೆ ಹೊಸ ಸೀರೆ, ಮಕ್ಕಳಿಗೆ ಹೊಸ ಬಟ್ಟೆ ವಾರಕ್ಕೊಂದು ಸಲವಾದರೂ ಸಿನೇಮಾ ಅಯ್ಯೊಯ್ಯೋ ಒಂದೇ ಎರಡೇ?" ಇವೆಲ್ಲವು ಐಷರಾಮಿ ಜೀವನಕ್ಕೆ ಹಾತೊರೆಯುವ ಜನರ ಅಸ್ತವ್ಯಸ್ತಗೊಂಡ ಸಂಸ್ಕೃತಿಯ ಚಿತ್ರಣವನ್ನು ನೀಡುತ್ತಿದೆ. ಸಂಪೂರ್ಣವಾಗಿ ನಾವೆಲ್ಲರೂ ಆಧುನೀಕರಣವನ್ನು ಒಪ್ಪಿಕೊಂಡು ಅದರಲ್ಲಿ ಮುಳುಗಿಹೋಗಿರುವ ಚಿತ್ರಣವನ್ನು ಕವಿತೆ ಕಟ್ಟಿಕೊಡುತ್ತದೆ.

ರಾಜಕೀಯದ ಬಗ್ಗೆ ಅಡಿಗರು ತಮ್ಮ ಕಾವ್ಯದಲ್ಲಿ ಮಾತನಾಡುತ್ತಾರೆ. ಅವರ 'ನೆಹರೂ ನಿವೃತ್ತರಾಗುವುದಿಲ್ಲ' ಕವಿತೆಯಲ್ಲಿ ನೆಹರೂರವರ ರಾಜಕೀಯವನ್ನು ವಿಮರ್ಶೆಗೊಡ್ಡಿದ್ದಾರೆ. ನೆಹರೂರವರ ರಾಜಕೀಯ ಮತ್ತು ದೇಶದ ಸ್ಥಿತಿಯನ್ನು ಜನರಿಗೆ ತೋರಿಸಿ, ಎಚ್ಚರಿಕೆ ಹೇಳುವ ಕವಿತೆ ಇದು. ಹೀಗೆ ಕವಿತೆ ಪ್ರಾರಂಭವಾಗುತ್ತದೆ.

**"ನೆಹರೂ ನಿವೃತ್ತರಾಗುವುದಿಲ್ಲ.**
**ಇನ್ನು ಪರವಾ ಇಲ್ಲ.**
**ಉದ್ದುದ್ದ ಮಾತುಗಳ ಕೊಂಡಿಕೊಂಡಿ ನಿಚ್ಚಣಿಕೆತುದಿ**
**ಅಲಕಾವತಿ ಖಜಾನೆ ಮೂಸದಿರದು;**
**ಹರಿದೀತು ವಾಗ್ರೂಪದಲ್ಲಿ ಹಾಲಿನಹಳ್ಳ"**[5]

ಈ ಸಾಲುಗಳಲ್ಲಿ ವ್ಯಂಗ್ಯ ಅಡಗಿದೆ. ನೆಹರೂ ನಿವೃತ್ತರಾಗದೇ ಇದ್ದರೆ ಏನೆಲ್ಲ ಘಟನೆ ಸಂಭವಿಸಬಹುದು ಎನ್ನುವುದು ಕವಿತೆಯ ಪ್ರಾರಂಭದ ಸಾಲುಗಳಲ್ಲಿ ಧ್ವನಿಸುತ್ತದೆ. ಈ ಸಾಲುಗಳು ಕವಿತೆಯಲ್ಲಿ ಮನರಾವರ್ತನೆಯಾಗುವುದನ್ನು ಕಾಣಬಹುದು. 'ಉದ್ದುದ್ದ ಮಾತುಗಳ ಕೊಂಡಿ ಕೊಂಡಿ ನಿಚ್ಚಣಿಕೆ ತುದಿ' ಎಂಬ ಸಾಲುಗಳು ನೆಹರೂರವರ ವ್ಯಕ್ತಿತ್ವವನ್ನು ಟೀಕೆಗೆ ಒಳಪಡಿಸುತ್ತಿವೆ. ನೆಹರೂ ಮಾಡಿದ ಭಾಷಣ ಅಥವಾ ಮಾತನಾಡುವ ಮಾತುಗಳು ಮೋಸದ ಮಾತು ಎನ್ನುವುದನ್ನು ಈ ಸಾಲುಗಳು

ಧ್ವನಿಸುತ್ತದೆ. ಹೀಗೆ ಕವಿತೆ ಮುಂದುವರೆಯುತ್ತಾ ನೆಹರೂವಿನ ಅವಾಸ್ತವಿಕ ಧೋರಣೆ ಹಾಗೂ ಟೊಳ್ಳು ವ್ಯಕ್ತಿತ್ವದ ವಿವರವನ್ನು ನೀಡುತ್ತದೆ.

**"ಎರಡು ದೋಣಿಗೆ ಕಾಲನಿಟ್ಟು ಸಾಗುವ ಶೂರ,**
**ಇಲ್ಲದ ತೃತೀಯ ಕ್ರಮಕ್ಕ ರಾವೆಲ್ಲೆಂದು ಕುದಿವ ಕುವರ,**
**ಬೇಸಗೆಯ ಗೆರೆತೊರೆಯ ಕನ್ನಡಿ ಜಲದ ಮೇಲೆ**
**ಮಳೆಗಾಳಿನೆಗಸುಗಳ ನಗುವ ವೀರ"**

ಇಲ್ಲಿ ನೆಹರೂರವರ ರಾಜಕೀಯ ಪ್ರಯಾಣವನ್ನು ಹೇಳಲಾಗುತ್ತಿದೆ. ನೆಹರೂ ಎರಡು ದೋಣಿಗೆ ಕಾಲನಿಟ್ಟು ಸಾಗುವ ಶೂರ. ಎರಡು ದೋಣಿಯ ಪ್ರಯಾಣದ ಅಂತ್ಯ ಏನು ಎಂಬುದನ್ನು ಊಹಿಸಿಕೊಂಡರೆ ಅದು ದುರಂತವೇ ಹೊರತು ಸುಖಾಂತ್ಯವಲ್ಲ ಅಂತಹ ನೆಹರೂವಿನ ಚಿತ್ರಣವನ್ನು ಕವಿತೆ ಕಟ್ಟಿಕೊಡುತ್ತದೆ. ಇಂತಹ ರಾಜಕೀಯ ನಾಯಕರನ್ನು ತಿರಸ್ಕರಿಸಿ, ಶ್ರೀರಾಮನಂತಹ ನಾಯಕರನ್ನು ಮೆಚ್ಚಿಕೊಳ್ಳುತ್ತಾರೆ. ಇದಕ್ಕೆ ಅವರ 'ಶ್ರೀರಾಮನವಮಿಯ ದಿವಸ' ಕವಿತೆಯೇ ನಿದರ್ಶನವಾಗಿದೆ.

ಅಡಿಗರ ರಾಮ ತನ್ನ ಅಂತರಂಗವನ್ನು ಪರೀಕ್ಷಿಸಿಕೊಳ್ಳುತ್ತ ಉತ್ತಮ ಚಾರಿತ್ರ್ಯವನ್ನು ಪ್ರಕಟಿಸಿದವನು. ತನ್ನ ಸಂಕಲ್ಪಬಲದಿಂದ ರಾಕ್ಷಸತನದ ವಿರುದ್ಧ ಹೋರಾಡಿದವನು.

**"ಶ್ರೀರಾಮನವಮಿಯ ದಿವಸ ರಾಮನಾಮಾಮೃತವೆ**
**ಪಾನಕ, ಪನಿವಾರ, ಕೋಸಂಬರಿ;**
**ಕರಬೂಜ ಸಿದ್ದೋಟುಗಳ ಹೋಳು ಸೀಕರಣೆ;**
**ವ್ಯಕ್ತ ಮಧ್ಯಕ್ಕೆ ಬಂದುರಿವ ಶಬರಿ"**[10]

ಕವಿತೆಯ ಪ್ರಾರಂಭದಲ್ಲೇ ಸಾಂಸ್ಕೃತಿಕ ವಾತಾವರಣವಿದೆ. ಸಾಮಾನ್ಯವಾಗಿ ಶ್ರೀರಾಮನವಮಿ ಎಂದರೆ ಕೋಸಂಬರಿ, ಕರ್ಬೂಜ ಇರುತ್ತದೆ. ಆದರೆ ಇಲ್ಲಿ ರಾಮನಾಮಾಮೃತವೇ ಎಲ್ಲವೂ ಆಗಿದೆ. ಇಲ್ಲಿ ರಾಮನ ಬರುವಿಕೆಗಾಗಿ ಕಾದುಕುಳಿತಿರುವ ಶಬರಿ ಕವಿಯಾಗಿ ವ್ಯಕ್ತಗೊಂಡಿದ್ದಾರೆ.

**"ಕೌಸಲ್ಯೆ ದಶರಥರ ಪುತ್ರಕಾಮೇಷ್ಟಿ ಗೆರೆ**
**ಹಠತ್ತಾಗಿ ತಾಗಿರೆ ತ್ರಿಕಾಲ ಚಕ್ರ**
**ಆಸ್ಫೋಟಿಸಿತ್ತು ಸಿಡಿತಲೆ; ಗರಿಷ್ಠ ತೇಜದವೇನೆ**
**ಕೆಳಪಟ್ಟು ಮಣ್ಣುಟ್ಟು ನಿಂತ ಘಟನೆ"**

ರಾಮ ಕೌಸಲ್ಯೆ ದಶರಥರ ಪುತ್ರಕಾಮೇಷ್ಟಿಯಾಗದಿಂದ ಹುಟ್ಟಿದವನು. ಇಲ್ಲಿ ರಾಮ ವ್ಯಕ್ತಿಗತ ನೆಲೆಯಿಂದ ಸಮಾಜಮುಖಿವಾಗಿ ಚಲಿಸುವುದನ್ನು ಕಾಣಬಹುದು. ವ್ಯಕ್ತಿ ಮತ್ತು ಸಮಾಜದ ಸಂಬಂಧದ ವಸ್ತುವಿನ ದೃಷ್ಟಿಯಿಂದ ಶ್ರೀರಾಮನವಮಿಯ ದಿವಸ ತುಂಬ ಮಹತ್ವದ ಕವನ. ವ್ಯಕ್ತಿ ಮತ್ತು ಸಮಾಜಗಳ ಮಿತಿಯನ್ನು ಕುರಿತಂಥ ತುಂಬ ಗಾಢಚಿಂತನೆ ಈ ಕವನದಲ್ಲಿದೆ. ವ್ಯಕ್ತಿ ಸಮಾಜದ ಆವರಣದಲ್ಲಿಯೇ ವಿಕಾಸಗೊಳ್ಳುವ ಕ್ರಮವನ್ನು ಕುರಿತು ಕವಿತೆಯಲ್ಲಿ ಚಿಂತಿಸಲಾಗಿದೆ. ಅನಂತಮೂರ್ತಿಯವರು ಅಡಿಗರ ನೆಹರೂ ಹಾಗೂ ರಾಮನನ್ನು ಕುರಿತು ಹೀಗೆ ಹೇಳುತ್ತಾರೆ. "ನಮ್ಮ ಸಂಸ್ಕೃತಿಯ ಬೋಳೆತನಕ್ಕೆ – ವಾಗ್ರೂಪದಲ್ಲಿ ಹಾಲಿನಹಳ್ಳ ಹರಿಸುವ ಕನಸುಗಾರಿಕೆಗೆ ಒಂದು ರೂಪಕವಾಗಿ ಇವರ ನೆಹರು ನಿಲ್ಲುತ್ತಾನೆ. ಇದಕ್ಕೆ ತದ್ವಿರುದ್ಧವಾದ ರೂಪಕವೆಂದರೆ "ಶ್ರೀರಾಮನವಮಿಯ ದಿವಸ"ದ ಶ್ರೀರಾಮಃ "ಗರಿಷ್ಠ ತೇಜದ ಮೊನೆ ಕೆಳಪಟ್ಟು ನಿಂತಘಟನೆ" ಇವನ ಅವತಾರ; ವಾಲ್ಮೀಕಿಯ "ಹುತ್ತಗಟ್ಟಿದ ಕೈ ಕಡೆದ ನೋಟ" ಇವನು, ಎನ್ನುತ್ತಾರೆ.

ಹೀಗೆ ಅಡಿಗರ ಶ್ರೀರಾಮನವಮಿಯ ದಿವಸ ಕವಿತೆಯು ಪುರಾಣದ ರಾಮನ ಮೂಲಕ ಸಾಮಾನ್ಯ ಮನುಷ್ಯನ ಉತ್ತಮವಾದ ಬೆಳವಣಿಗೆ ದೃಷ್ಟಿಯನ್ನು ಹೇಳಿದರೆ, ತಲೆಮಾರುಗಳ ಸಂಘರ್ಷವನ್ನು ವರ್ಧಮಾನದ ಕವಿತೆಯು ಹೇಳುತ್ತದೆ. ಮಗ ಅಂಕುಶವಿಲ್ಲದ ರೀತಿಯಲ್ಲಿ ತನ್ನಿಷ್ಟ ಬಂದಂತೆ ಜೀವಿಸುತ್ತಿದ್ದರೆ ತಂದೆ ತನ್ನ ಮಗ ಸರಿಯಾದ ದಾರಿ ಹಿಡಿಯುತ್ತಾನೆಯೇ ಎಂದು ಆತಂಕಗೊಂಡಿದ್ದಾನೆ. ಮುಂದೆ ತನ್ನ ಮಗನ ವ್ಯಕ್ತಿತ್ವ ಹನುಮದ್ವಿಕಾಸದಂತೆ ತಂದೆಯ ಕಣ್ಣೆದುರು ನಿಲ್ಲುವ ಚಿತ್ರಣವಿದೆ. ಹೀಗೆ ಮೊದಲಿಗೆ ಹೊಸ ಜನಾಂಗದ ರೀತಿ ರಿವಾಜುಗಳನ್ನು ಕಂಡು ಬೆದರಿದಂತೆ ಕಂಡರೂ, ಇಡೀ ಕವನ ಆಕರ್ಷಣೆ – ವಿಕರ್ಷಣೆಗಳ ದ್ವಂದ್ವದಲ್ಲೇ ಸಾಗುತ್ತದೆ.

'ಭೂತ' ಕವಿತೆಯನ್ನು ನೋಡುವುದಾದರೆ ಭೂತವನ್ನು ಭೂತಕಾಲ, ಭೂತ (Gost) ಪಾತಾಳ ಹೀಗೆ ಅರ್ಥೈಸಿದ್ದಾರೆ.

**"ಕಾದುತ್ತಿವೆ ಭೂತಕಲಾದ ಭ್ರೂಣಗೂಢಗಳು;**
**ಹುಗಿದ ಹಳಬಾವಿಯೊಳ ಕತ್ತಲ ಹಳಸು ಗಾಳಿ**
**ಅಂಬೆಗಾಲಿಟ್ಟು ತಲೆಕೆಳಗು ತೆವಳುತ್ತೇರಿ**
**ಅಳ್ಳಳ್ಳಾಯಿ ಜಪಿಸುವ ಬಿಸಿಲಕೋಲಿಗೆಗರಿ ತೆಕ್ಕಾಮುಕ್ಕಿ**
**ಹಾಯುತ್ತಿದೆ ತುಳಸಿವೃಂದಾವನದ ಹೊದರಿಗೂ,**
**ತೊಟ್ಟು ಕಳಚಿದ ಹೊಕ್ಕುಳಿನ ಬಳ್ಳಿ ದಡದಲ್ಲಿ**
**ಕತ್ತರಿಸಿದಿಲಿಬಾಲ ಮಿಡುಕುತ್ತದೆ.**
**ಕತ್ತಲಲ್ಲೇ ಕಣ್ಣು ನೆಟ್ಟು ತಡಕುವ ನನಗೆ**

**ಹೊಳೆವುದು ಹಲಾತ್ತಸೊಂದೊಂದು ಚಿನ್ನದ ಗೆರೆ;**

**ಅಮಾವಾಸ್ಯೆ ಕದಕಗಳಲ್ಲಿ ಹೇಗೋ ಬಿದ್ದು ಒದ್ದಾಡುತ್ತಿರುವ ಗರಿಸುಟ್ಟತಾರೆ"[13]**

ಪ್ರಾರಂಭದಲ್ಲಿ ಗತಕಾಲವನ್ನು ಕುರಿತು ಮಾತನಾಡುತ್ತಾರೆ. ಇಲ್ಲಿ ಹಳೆಯ ಭೂಮಿಯ ಹಳಸುಗಾಳಿ ಎನ್ನುವುದು ಗತಕಾಲವನ್ನು ಸೂಚಿಸುತ್ತದೆ. ಈ ಹಳಸುಗಾಳಿ ನಿರ್ಮಲವಾದ ಹೊರವಾತಾವರಣವನ್ನು ಕೆಡಿಸುವ ಚಿತ್ರಣವಿದೆ. ಗತಕಾಲಗಳೇನು ಅಷ್ಟು ಕ್ರಮಬದ್ಧವಲ್ಲ. ಇದು ವರ್ತಮಾನದಷ್ಟು ನಿಶ್ಚಿತವಲ್ಲ. ಈ ಭೂತಕಾಲವೆನ್ನವುದೇ ಅಮೂರ್ತವಾಗಿದೆ. ಆ ಅಮೂರ್ತತೆಯನ್ನು ಮೂರ್ತಗೊಳಿಸಬೇಕು ಎನ್ನುವ ಹಂಬಲವಿದೆ. ಹೊಕ್ಕುಳಿನ ಬಳ್ಳಿ ಎಂಬ ಮಾತು ತಾಯಿಯಿಂದ ಬೇರೆಯಾಗಿರುವ, ಬೇರೆ ಯಾವ ನೆಲೆಯಿಲ್ಲದ ವ್ಯಕ್ತಿಯ ಅನಾಥಭಾವವನ್ನು ಸೂಚಿಸುತ್ತದೆ.

ಮುಂದಿನ ಭಾಗದಲ್ಲಿ ಪಿತೃಪಿತಾಮಹರು ನೆಲೆಯಿಲ್ಲದೆ ಅಲೆಯುವ ಕಾರಣ 'ತಂತ್ರ' ಗೊತ್ತಿದ್ದರೂ ಮಂತ್ರ ಮರೆತಿದ್ದರಿಂದ ಈ ರೀತಿ ಆಗಲು ಕಾರಣ ಪುರೋಹಿತನೊಬ್ಬ ಪಶ್ಚಿಮಬುದ್ಧಿಯಿರುವುದು ಎಂದು ವರ್ಣಿಸಲಾಗಿದೆ. ಈ ಮೂಲಕ ಹೇಳುವುದೇನೆಂದರೆ ನಮ್ಮದೇ ಆದ ಸ್ವಂತ ಪರಂಪರೆಯನ್ನು ಕಳೆದುಕೊಂಡಿರುವ ಸ್ಥಿತಿಯನ್ನು ಹಾಗೂ ಹಿಂದಿನದ್ದನ್ನೇ ಕುರಿತು ಪಶ್ಚಾತ್ತಾಪ ಪಟ್ಟರೆ ವರ್ತಮಾನದ ಬದುಕು ನಿರರ್ಥಕವಾಗುತ್ತದೆ ಎಂಬುದನ್ನು ಸೂಚಿಸುತ್ತದೆ. ಹೀಗೆ ಕವಿತೆ ಪರಂಪರೆ – ವ್ಯಕ್ತಿ ಸಂಬಂಧವನ್ನು ಕುರಿತು ಮಾತನಾಡುತ್ತಾ ಈ ವಿನಾಶಕಾರಿ ಭೂತಗಳು ವರ್ತಮಾನದಲ್ಲಿ ಕಲ್ಯಾಣಕಾರಿಯಾಗಿ ಸಮೃದ್ಧಿ ನಾಗರಿಕತೆ ಸಂಸ್ಕೃತಿಯನ್ನು ಸೃಷ್ಟಿಮಾಡಬೇಕು ಎಂದು ಹಂಬಲಿಸುತ್ತದೆ.

ಅಡಿಗರ ಒಟ್ಟುಕಾವ್ಯವನ್ನು ಪರಿಶೀಲಿಸಿದಾಗ ಆಧುನಿಕ ಸಮಾಜವು ಒಂದು ರೀತಿಯ ಸರ್ವಾಧಿಕಾರಿ ಸಮಾಜಗಳಾಗಿ ಪರಿವರ್ತಿತವಾಗುತ್ತಿದೆ ಎನ್ನುವ ಆತಂಕವಿದೆ. ಹೀಗೆ ಇವರ ಕಾವ್ಯವು ಇಂತಹ ಆತಂಕವನ್ನು ಹೇಳುತ್ತಾ ಆರೋಗ್ಯಕರ ಸಮಾಜವನ್ನು ಬಯಸುವಂತದ್ದಾಗಿದೆ. ಅಡಿಗರ ಸಂಸ್ಕೃತಿಚಿಂತನೆ ಕುರಿತು ಅನಂತಮೂರ್ತಿಯವರು ಹೀಗೆ ಹೇಳುತ್ತಾರೆ. "ಸಂಸ್ಕೃತಿಯ ಮೂಲಭೂತ ಪ್ರವೃತ್ತಿಗಳ ಬಗ್ಗೆ ಅಡಿಗರಿಗಿರುವ ಆಕರ್ಷಣೆ–ವಿಕರ್ಷಣೆಯ ದ್ವಂದ್ವ ಅವರ ಕಾವ್ಯದ ಮುಖ್ಯ ಆಸಕ್ತಿಗಳಲ್ಲಿ ಒಂದು ಎನ್ನಬಹುದು; ನಮ್ಮ ಸಂಸ್ಕೃತಿಯ ಮೂಲತತ್ವಗಳನ್ನು ಅಡಿಗರು ಎತ್ತಿ ಹಿಡಿಯುವಾಗಲೂ ಆಚಾರದಲ್ಲಿರುವ ಸಂಸ್ಕೃತಿಯ ಸಂದರ್ಭ ಇವರ ಗಮನದಲ್ಲಿದ್ದೇ ಇರುತ್ತದೆ. ಆದ್ದರಿಂದ ಕವನದ ಧೋರಣೆಯಲ್ಲಿ ಹಳೆಯದನ್ನು ಹೊಗಳುವ ಅಥವಾ ಕಳೆದುದಕ್ಕಾಗಿ ಹಳಹಳಿಸುವ ಕೀರ್ತನಾ ಧಾಟಿಗೆ ಬದಲಾಗಿ, ಇರುವುದರ ಅಪಾಯಕಾರಿ ಸ್ವರೂಪದ ಬಗೆಗೆ ಹೆಚ್ಚು ಕಾಳಜಿ ವ್ಯಕ್ತವಾಗುತ್ತದೆ. ಸಂಸ್ಕೃತಿಯಲ್ಲಿನ ಆದರ್ಶವಾದಿತನಕ್ಕೆ ಅಡಿಗರು ತೋರಿಸುವ ವಿರೋಧ ಇಬ್ಬಂದಿತನದಿಂದ ಕೂಡಿದ್ದು ಎನ್ನುವುದು; ಅಡಿಗರಿಗೂ ಸಂಸ್ಕೃತಿಗೂ ಇರುವ ಸಂಬಂಧ

ಒಂದಕ್ಕೊಂದು ಹೆಣೆದುಕೊಂಡ ಟೆನ್ಷನ್ನಿನದು ಎಂಬುದನ್ನು ನಾವು ಯಾವತ್ತೂ ಮರೆಯದೆ ಅವರ ಕವನಗಳನ್ನು ಓದಬೇಕು" ಎನ್ನುತ್ತಾರೆ.

ಒಟ್ಟಾರೆ ಅಡಿಗರ ಕಾವ್ಯದಲ್ಲಿ ಸಮಕಾಲೀನ ಆದರ್ಶಗಳು, ಮೌಲ್ಯಗಳು ಕುಸಿಯುತ್ತಿರುವ ದುರಂತದ ಮಧ್ಯೆ ಬದುಕಬೇಕಾಗಿ ಬಂದಾಗ ಸಂಸ್ಕೃತಿಯನ್ನು, ಪರಂಪರೆಯನ್ನು ತನ್ನ ವ್ಯಕ್ತಿತ್ವದ ನೆಲೆಯಿಂದ ಶೋಧಿಸುವ ವಿಮರ್ಶಿಸುವ ಹಾಗೂ ಬೆಲೆಕಟ್ಟುವ ಮನೋಧರ್ಮವನ್ನು ಕಾಣಬಹುದು. ತಮಗೂ ಸಂಸ್ಕೃತಿಗೂ ಇರುವ ಸಂಬಂಧವನ್ನು ತೀವ್ರಚಿಂತನೆಗೆ ಗುರಿಮಾಡುವುದರ ಮೂಲಕ ವ್ಯಕ್ತಿ ಸಮಾಜದ ಸಂದರ್ಭದಲ್ಲಿ ತಲೆದೋರಿದ ಅಂತರ ಅವನನ್ನು ದಿಗ್ಭ್ರಮೆಗೊಳಿಸಿತು.

ಹೀಗೆ ಅಡಿಗರ ಕಾವ್ಯ ವ್ಯಕ್ತಿ ಕೇಂದ್ರಿತ ಮೂಲದಿಂದಲೇ ತನ್ನ ಹಾಗೂ ಸಮಾಜದ ವಿಕಾಸದ ಮೂಲವನ್ನು ಅರಿಯುವ, ಮಾನವೀಯ ಸಂಬಂಧಗಳನ್ನು ಶೋಧಿಸುವುದಾಗಿದ್ದು, ನೀತಿಪರತೆ ಹಾಗೂ ಪ್ರಾಚೀನ ಪರಂಪರೆಯ ಜೊತೆ ಆಧುನಿಕ ಯಂತ್ರ, ನಾಗರೀಕತೆಯ ಫಲವಾದ ಆಧುನಿಕ ವ್ಯಕ್ತಿ ಇರಿಸಿಕೊಳ್ಳಬೇಕಾದ ಚಿಂತನೆ ಕಾಣಬಹುದು. ಹಾಗೂ ಸಂಸ್ಕೃತಿ ಅವನತಿಯನ್ನು ಕುರಿತ ವ್ಯಗ್ರತೆ, ಆಧುನಿಕ ಬದುಕಿನ ಮೌಲ್ಯರಹಿತ ಸ್ಥಿತಿಯನ್ನು ಅವರ ಕಾವ್ಯ ತೆರೆದಿಡುತ್ತದೆ.

ಅರವತ್ತರ ದಶಕದಲ್ಲಿ "ಪಾಶ್ಚಿಮಾತ್ಯ ಪ್ರಭಾವಕ್ಕೆ ತನ್ನನ್ನು ಅತಿಯಾಗಿ ತೆರೆದುಕೊಂಡು, ಅದು ತಪ್ಪೆಂದು ಅನಿಸಿ, ಒಂದು ಬಗೆಯ ಜ್ಞಾನೋದಯದ ಮನಸ್ಥಿತಿಯಲ್ಲದವರಿಗೆ ಎರಡು ಸಂಗತಿಗಳಿಂದ ಬಿಡುಗಡೆ ಪಡೆಯಬೇಕೆನಿಸಿತು. ಒಂದು ಸನಾತನವಾದಿಯಾದ ಬ್ರಾಹ್ಮಣವಾದದಿಂದ, ಎರಡು, ಅತಿಯಾಗಿ ಪಾಶ್ಚಾತ್ಯೀಕರಣಗೊಳ್ಳುತ್ತಿದ್ದ ತನ್ನ ವಿಚಾರ ಕ್ರಮಗಳಿಂದ. ಇಂತಹ ಇಬ್ಬದಿಯ ಬಿಡುಗಡೆಗಾಗಿ ಏಕಕಾಲಕ್ಕೆ ಬ್ರಾಹ್ಮಣ ಹಿಂದೂ ಹಾಗೂ ಯೂರೋಪ್ ಎರಡನ್ನು ವಿಮರ್ಶಿಸಬೇಕಾಯಿತು. ಸ್ಥಳೀಯ ಬದುಕಿನಲ್ಲಿ ಬೇರುಬಿಡಬೇಕಾಯಿತು. ಇಂತಹ ಸಂಕೀರ್ಣ ಅವಸ್ಥೆಯಲ್ಲಿ ಸಂಸ್ಕೃತಿ ಚಿಂತನೆ ಮಾಡಿದವರಲ್ಲಿ ಯು.ಆರ್.ಅನಂತಮೂರ್ತಿಯವರು ಒಬ್ಬರು"[13]

ಅನಂತಮೂರ್ತಿಯವರ 'ಪೂರ್ವಾಪರ' ಮತ್ತು 'ಇಂಗ್ಲೀಷ್ ಬ್ರಾಹ್ಮಣ ಕನ್ನಡ ಶೂದ್ರ' ಕೃತಿಯನ್ನು ಗಮನಿಸಿದರೆ ಅಲ್ಲಿ ಆಧುನೀಕರಣಕ್ಕೆ ಸಂಪೂರ್ಣವಾಗಿ ತೆರೆದುಕೊಂಡ ಕನ್ನಡ ಭಾಷೆಯ ಅಳಿವು ಉಳಿವಿನ ಬಗ್ಗೆ ಮಾತನಾಡುತ್ತಾರೆ. ವಸಾಹತೀಕರಣದ ಪ್ರಭಾವದಿಂದ ಇಂಗ್ಲೀಷ್ ಯಜಮಾನಿ ಭಾಷೆ ಆಗುತ್ತಿರುವುದನ್ನು ಕುರಿತು ಮಾತನಾಡುತ್ತಾರೆ. ಹೀಗೆ ವಸಾಹತೀಕರಣ ತಂದ ಹಲವು ತೊಡಕುಗಳಿಗೆ ಪ್ರತಿಕ್ರಿಯಿಸುತ್ತಾ ಪ್ರತಿ ಸಂಸ್ಕೃತಿಯೊಂದನ್ನು ಸ್ಥಾಪಿಸುವ ಹಂಬಲವಿದೆ. 'ಭಾಷೆ ಮತ್ತು ಸಂಸ್ಕೃತಿ' ಲೇಖನದಲ್ಲಿ ಇಂಗ್ಲೀಷ್‌ನ ವ್ಯಾಮೋಹಕ್ಕೆ ಒಳಗಾಗಿ ಕನ್ನಡವನ್ನು ಮಾತನಾಡಲು ತಿರಸ್ಕರಿಸುವ ಜನರ ಧೋರಣೆಯಲ್ಲಿ ಕ್ರೂರ ಯಜಮಾನಿಕೆಯ ದರ್ಪವಿರುವುದನ್ನು ಹೇಳುತ್ತಿದ್ದಾರೆ.

ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದ ಇವರು ಜಾಗತೀಕರಣದಿಂದ ಉಂಟಾದ ಭಾಷೆ ಬಿಕ್ಕಟ್ಟನ್ನು ಹೇಳುತ್ತಾ, ಮಕ್ಕಳಿಗೆ ಶಾಲಾ ಅವಸ್ಥೆಯಲ್ಲಿ ಇಂಗ್ಲೀಷ್ ಕಲಿಕೆ ನೀಡುವುದು ಸರಿಯಾದ ಕ್ರಮವಲ್ಲ. ಆ ಮಕ್ಕಳು ಕಾಲೇಜಿಗೆ ಬರುವ ಸಂದರ್ಭದಲ್ಲಿ ಒಂದು ವರ್ಷ ಇಂಗ್ಲೀಷ್ ಕಲಿಕೆಯ ಉತ್ತಮ ತರಬೇತಿಯನ್ನು ನೀಡಬೇಕು ಎನ್ನುತ್ತಾರೆ. ಹಾಗೆಂದು ಅನಂತಮೂರ್ತಿ ಇಂಗ್ಲೀಷ್ ಭಾಷೆಯ ಅಥವಾ ಆಧುನೀಕರಣದ ವಿರೋಧಿಯಲ್ಲ. ಆಧುನಿಕರಣವನ್ನು ಸ್ವೀಕರಿಸಬೇಕು ಆದರೆ ಇಲ್ಲಿನ ಕನ್ನಡ ಭಾಷಾ ಸಂಸ್ಕೃತಿ ಸಂಪೂರ್ಣವಾಗಿ ನಾಶವಾಗದ ರೀತಿಯಲ್ಲಿ ಸ್ವೀಕರಿಸಬೇಕು ಎನ್ನುವುದು ಅವರ ಅಭಿಪ್ರಾಯ.

'ಇಂಗ್ಲೀಷ್ ಬ್ರಾಹ್ಮಣ, ಕನ್ನಡ ಶೂದ್ರ' ಎಂಬ ಲೇಖನದಲ್ಲಿ ಅನಂತಮೂರ್ತಿಯವರು ಬ್ರಾಹ್ಮಣ, ಶೂದ್ರ ಎಂಬ ಪದವನ್ನು ಬಳಸಿರುವಲ್ಲೇ ಇಂದು ಇಂಗ್ಲೀಷ್ ಆಳುವ ಭಾಷೆಯಾಗಿ ಕನ್ನಡ ಅಧೀನಭಾಷೆಯಾಗಿರುವ ಸ್ಥಿತಿ ಸ್ಪಷ್ಟವಾಗುತ್ತದೆ. "ಇಂಗ್ಲೀಷ್ ಗೊತ್ತಿಲ್ಲದ ಹಳೆಯ ಕಾಲದ ವಿದ್ವಾಂಸರನ್ನು, ಬೇಡ ಹಳ್ಳಿಯ ಸಾಮಾನ್ಯ ಜನರನ್ನು ಮಾತನಾಡಿಸಿ ನೋಡಿ! ನಮ್ಮ ಮೂಳೆ ಇಲ್ಲದ ಕನ್ನಡ, ರಕ್ತವಿಲ್ಲದ ಇಂಗ್ಲೀಷ್‌ನ ಬಗ್ಗೆ ನಾಚಿಕೆಯಾಗುತ್ತದೆ. ಈ ದೃಷ್ಟಿಯಿಂದ ನೋಡಿದಲ್ಲಿ ಇಂದು ನಮ್ಮದು ಎನಿಸುವ ಸಂಸ್ಕೃತಿಯನ್ನು ಈತನಕ ಉಳಿಸಿಕೊಂಡು ಬಂದವರು ಹೆಬ್ಬೆಟ್ಟಿನ ಸಹಿಹಾಕುವ ನಮ್ಮ ಹಳ್ಳಿಯ ಜನ"[೧೪] ಇವರ ಪ್ರಕಾರ ಸಂಸ್ಕೃತಿ ಎನ್ನುವುದು ಜೀವಂತವಾಗಿ ಉಳಿದಿರುವುದು ಹಳ್ಳಿಯ ಜನರಲ್ಲಿ ಎಂಬುದು ಈ ಮಾತುಗಳಿಂದ ಸ್ಪಷ್ಟವಾಗುತ್ತದೆ. ನಗರೀಕರಣಕ್ಕೆ ಒಳಗಾದ ಪಟ್ಟಣದ ಜನರು ಸಾಮಾನ್ಯವಾಗಿ ಜಾಗತೀಕರಣದಲ್ಲಿ ಸಿಲುಕಿಕೊಂಡು ತಮ್ಮತನವನ್ನು ಕಳೆದುಕೊಂಡು ವೇಷಧಾರಿಗಳಾಗಿ ಬದುಕುತ್ತಿರುತ್ತಾರೆ.

"ನಾವು ಪಾಶ್ಚಿಮಾತ್ಯ ಸಂಸ್ಕೃತಿಯ ಸಂಪರ್ಕದಿಂದ ಪಡೆದದ್ದಷ್ಟನ್ನು ನಮ್ಮ ಜನರ ಜೀವನದ ವಸ್ತುಗಳನ್ನಾಗಿ ಮಾಡಿದ್ದೇವೆ ಎನ್ನುವುದರ ಜೊತೆಗೆ ಕುಮಾರವ್ಯಾಸ, ಪಂಪ, ಬಸವಣ್ಣ ಇತ್ಯಾದಿ ಜನರು ಸಂಸ್ಕೃತದಲ್ಲಿದ್ದ ವಿಚಾರವನ್ನು, ಕಾವ್ಯವನ್ನು ತಮ್ಮ ಜನರ ನಿತ್ಯಜೀವನದ ಸೊತ್ತಾಗಿ ಹೇಗೆ ಮಾಡಿದರು ಎಂಬುದನ್ನು ಹೋಲಿಸಿ ನೋಡಿದರೆ ನಾವು ತಲೆ ತಗ್ಗಿಸಬೇಕಾಗುತ್ತದೆ"[೧೫] ಹಿಂದೆ ಸಂಸ್ಕೃತ ಭಾಷೆ ಯಜಮಾನಿ ಭಾಷೆಯಾಗಿ ರೂಪುಗೊಂಡಿತ್ತು. ಹನ್ನೆರಡನೇ ಶತಮಾನದ ಹೊತ್ತಿಗೆ ಬಸವಣ್ಣನವರು ಸಾಮಾನ್ಯ ಜನರ ಆಡುಭಾಷೆಯಾದ ಕನ್ನಡವನ್ನು ಪ್ರಬುದ್ಧಮಾನಕ್ಕೆ ತಂದರು. ಆದರೆ ಇಂದು ಸಂಸ್ಕೃತ ಭಾಷೆಯ ಸ್ಥಾನವನ್ನು ಇಂಗ್ಲೀಷ್‌ಭಾಷೆ ಆವರಿಸಿಕೊಂಡಿದೆ. ಅಂದು ಬಸವಣ್ಣ, ಕುಮಾರವ್ಯಾಸ ಮಾಡಲು ಸಾಧ್ಯವಾದ ಕಾರ್ಯ, ಇಂದಿನ ಸಂದರ್ಭದಲ್ಲಿ ಸಾಧ್ಯವಾಗದ ಸ್ಥಿತಿಯನ್ನು ಕಂಡು ವಿಷಾದಿಸುತ್ತಿದ್ದಾರೆ. ಇಂಗ್ಲಿಷ್ – ಬ್ರಾಹ್ಮಣ ಮತ್ತು ಕನ್ನಡ – ಶೂದ್ರವೆನ್ನುವ ಇನ್ನೆರಡು ಅಮಾನುಷ ಜಾತಿಗಳು ಹುಟ್ಟಿ ಯಂತ್ರನಾಗರೀಕತೆ ಇನ್ನೆಲ್ಲೂ ಮಾಡದಂತಹ ಘೋರ ಪರಿಣಾಮವನ್ನು ನಮ್ಮ ನಾಡಿನಲ್ಲಿ ಮಾಡುತ್ತಿದೆ ಎಂಬ ಆತಂಕವಿದೆ. ನಮ್ಮಲ್ಲಿ ಯಂತ್ರನಾಗರೀಕತೆ ಹಾಗೂ

ಹೊಸವಿಚಾರಗಳ ಸೃಷ್ಟಿ ನಮ್ಮ ಭಾಷೆಯ ಮೂಲಕವೇ ಆಗಬೇಕು. ಆಗ ಮಾತ್ರ ಕನ್ನಡ ಭಾಷೆಯ ಉಳಿವು ಸಾಧ್ಯವಾಗುತ್ತದೆ. ಒಂದು ಭಾಷೆ ನಾಶವಾದರೆ ಇಡೀ ಒಂದು ಜನಾಂಗದ ಸಂಸ್ಕೃತಿಯೇ ನಾಶವಾಗುತ್ತದೆ. ಇಂತಹ ಭಾಷೆಗಳ ಉಳಿವು ಬಹಳ ಮುಖ್ಯ ಇದರ ಉಳಿವಿಗೆ ಮುಖ್ಯವಾಗಿ ಅಧ್ಯಯನ ಕ್ಷೇತ್ರವು ನಮ್ಮ ಭಾಷೆಯಲ್ಲಿ ನಡೆಯಬೇಕು. ವಿಷಯ ಗ್ರಹಿಸುವಿಕೆಗೆ ಇಂಗ್ಲೀಷ್ ಭಾಷೆಯನ್ನು ಬಳಸಿ ಆ ಮಾಹಿತಿಯನ್ನು ಅಭಿವ್ಯಕ್ತಿಗೊಳಿಸುವುದಕ್ಕೆ ನಮ್ಮ ಭಾಷೆಯನ್ನು ಬಳಸಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಇನ್ನು ಸಂಸ್ಕಾರ, ಪ್ರಶ್ನೆ, ಘಟಶ್ರಾದ್ಧದಲ್ಲಿ ಇವರ ಸಂಸ್ಕೃತಿಪರ ಚಿಂತನೆಯನ್ನು ಗ್ರಹಿಸುವುದಾದರೆ ಸಮಾಜ ಈಗಾಗಲೇ ಮೌಲ್ಯವಾದದ್ದು ಸಂಸ್ಕೃತಿ ಎಂದು ಏನೆಲ್ಲವನ್ನು ಅರ್ಥೈಸಿಕೊಂಡಿತ್ತೋ, ಅಂದರೆ ಕಾಮ, ಪ್ರಣಯ ಮುಂತಾದ ನೈಸರ್ಗಿಕವಾದ ಬಯಕೆಗಳನ್ನು ಸಮಾಜ ಸಂಸ್ಕೃತಿ ಹತ್ತಿಕ್ಕಲು ಪ್ರಯತ್ನಿಸುತ್ತಿತ್ತು. ಆದರೆ ಅನಂತಮೂರ್ತಿಯವರು ಅವೆಲ್ಲವನ್ನು ಮೀರುವುದರ ಮೂಲಕ ಪ್ರತಿಸಂಸ್ಕೃತಿಯನ್ನು ತಮ್ಮ ಸಾಹಿತ್ಯದಲ್ಲಿ ನಿರ್ಮಿಸುವುದನ್ನು ಕಾಣಬಹುದು.

ಸಂಸ್ಕಾರ ಕಾದಂಬರಿಯಲ್ಲಿ ಗೊಡ್ಡು ಸಂಪ್ರದಾಯಗಳ ಹಾಗೂ ಅರ್ಥಹೀನ ಧಾರ್ಮಿಕ ಮೌಲ್ಯಗಳಿಂದ ಕೂಡಿದ ಸಮಾಜದ ಚಿತ್ರಣವಿದೆ. ಶ್ರೇಷ್ಠ ಸಾಂಸ್ಕೃತಿಕ ಹಿನ್ನೆಲೆಯನ್ನುಳ್ಳ ಇಲ್ಲಿನ ಧರ್ಮವು ಒಂದು ಹೆಣವನ್ನು ಸಕಾಲದಲ್ಲಿ ಸಂಸ್ಕಾರ ಮಾಡಲಾರದಂಥ ಸ್ಥಿತಿಯಲ್ಲಿದೆ. ಸೂಳೆ ಎನಿಸಿಕೊಂಡ ಚಂದ್ರಿಯಮಾನವೀಯ ಹಾಗೂ ವಾಸ್ತವ ಪ್ರಜ್ಞೆಯ ಮುಂದೆ ಇಲ್ಲಿನ ಶ್ರೇಷ್ಠಧರ್ಮ ಕೀಳಾಗಿ ಕಾಣಿಸುತ್ತದೆ. ಇಂಥ ಸ್ಥಿತಿಯನ್ನು ಮೊದಲೇ ಮನಗಂಡಿದ್ದ ನಾರಾಯಣಪ್ಪ ಇದನ್ನೆಲ್ಲ ತಿರಸ್ಕರಿಸಿ ಅಸ್ತಿತ್ವವಾದಿಯಾಗಿದ್ದಾನೆ. ಆದರೆ ಇಂಥ ಸಾಂಪ್ರದಾಯಿಕ ಮೌಲ್ಯಗಳ ಪ್ರತೀಕವೆಂಬುತ್ತಿದ್ದ ಪ್ರಾಣೇಶಾಚಾರ್ಯರೆ ಚಂದ್ರಿಯ ತೋಳ್ತೆಕ್ಕೆಯಲ್ಲಿ ಹೆಣ್ಣಿನ ಸುಖ ಅನುಭವಿಸಿದಾಗ ಸಹ ಪ್ರಕೃತಿಯ ಜಯವನ್ನು ಕಾಣುತ್ತೇವೆ. ಇಲ್ಲಿ ಅರ್ಥಹೀನ ಸಂಸ್ಕೃತಿಯ ಆಚರಣೆ ಮತ್ತು ಗೊಡ್ಡು ಧರ್ಮವೊಂದರ ಒಡಕುಗಳನ್ನು ಅನಂತಮೂರ್ತಿಯವರು ವಿಮರ್ಶಿಸಿದ್ದಾರೆ.

'ಘಟಶ್ರಾದ್ಧ' ಕತೆಯ ಯಮುನಕ್ಕಳ ಹಾಗೂ 'ಪ್ರಶ್ನೆ' ಕತೆಯ ಪಾರ್ವತಿಯ ಲೈಂಗಿಕ ಬಯಕೆ ಸಹಜವಾದದ್ದು. ಈ ಇಬ್ಬರೂ ಚಿಕ್ಕ ವಯಸ್ಸಿನಲ್ಲಿಯೇ ಗಂಡಂದಿರನ್ನು ಕಳೆದುಕೊಂಡವರು. ಆದರೆ ಇವರ ನೈಸರ್ಗಿಕವಾದ ಬಯಕೆಯನ್ನು ಸಮಾಜ ಒಪ್ಪುವುದಿಲ್ಲ. ಕಾಮ, ಪ್ರಣಯ ಮುಂತಾದ ನೈಸರ್ಗಿಕವಾದ ಬಯಕೆಯನ್ನು ಹತ್ತಿಕ್ಕುತ್ತದೆ. ಸಮಾಜ ಇವರನ್ನು ಕೆಟ್ಟ ದೃಷ್ಟಿಯಿಂದ ನೋಡುತ್ತದೆ. ಯಮುನಕ್ಕಳ ತಂದೆ ಮರುವಿವಾಹ ಆಗಬಹುದು. ಆದರೆ ಯಮುನಕ್ಕನಿಗೆ ಯಾವುದೇ ಅವಕಾಶಗಳಿಲ್ಲದ ಸ್ಥಿತಿ ನಿರ್ಮಾಣವಾಗಿದೆ. ಇದೂವರೆಗೂ ಸಮಾಜ ಯಾವುದನ್ನು ನೈತಿಕತೆಯೆಂದು

ಕರೆದಿತ್ತೋ ಆ ನೈತಿಕತೆಯನ್ನು ನೋಡುವ ದೃಷ್ಟಿ ಬದಲಾಗಿದೆ. ಹೆಣ್ಣಿನ ಲೈಂಗಿಕತೆಗೂ ಪ್ರಾಮುಖ್ಯತೆಯನ್ನು ನೀಡಲಾಗಿದೆ.

ಪವಿತ್ರ ಆದರ್ಶಮೌಲ್ಯಗಳ ಸಾಧನೆಯೇ ಸಂಸ್ಕೃತಿ ಎಂದು ಅರ್ಥೈಸಿಕೊಂಡಿದ್ದ ಸಮಾಜಕ್ಕೆ ಅಡಿಗ, ಅನಂತಮೂರ್ತಿ, ಲಂಕೇಶರು ತಮ್ಮ ಸಾಹಿತ್ಯದ ಮೂಲಕ ಒಂದು ರೀತಿ shock ನೀಡುತ್ತಿದ್ದಾರೆ. ಪ್ರೀತಿ, ಕಾಮ, ಪ್ರಣಯ ಎನ್ನವುದು ಸಮಾಜದಲ್ಲಿ ನೀತಿ ಮತ್ತು ಅನೀತಿಯ ನೆಲೆಯಲ್ಲಿ ಹುಟ್ಟಿಬಂದಿದೆ. ಆ ಕಾರಣ ಯಾವುದು ನೀತಿಯುತವಾದದ್ದೋ ಅದೇ ಸಂಸ್ಕೃತಿ ಎಂದು ಸಮಾಜ ನಂಬಿತ್ತು. ಆದರೆ ಇಲ್ಲಿ ಒಂದು ಸಮುದಾಯ ಎಂದ ಮೇಲೆ ಅಲ್ಲಿನ ಕೆಟ್ಟದ್ದು, ಒಳ್ಳೆಯದು ಎಲ್ಲವು ಸೇರಿ ಸಂಸ್ಕೃತಿ ರೂಪುಗೊಳ್ಳುತ್ತದೆ ಎನ್ನುವ ಅಭಿಪ್ರಾಯ ಕಾಣಬಹುದು.

ಹೀಗೆ ೬೦-೭೦ರ ದಶಕದಲ್ಲಿ ಅಡಿಗ ಮತ್ತು ಅನಂತಮೂರ್ತಿಯವರು ತಮ್ಮ ಸಾಹಿತ್ಯದ ಮೂಲಕ ಸಂಸ್ಕೃತಿಪರ ಚಿಂತನೆಯನ್ನು ನಡೆಸಿದವರು. ಇಬ್ಬರು ಈಗಾಗಲೇ ಇರುವ ಸಮಾಜದ ಒಪ್ಪಿತ ಸಂಸ್ಕೃತಿಯನ್ನು ಧಿಕ್ಕರಿಸಿ ಪರ್ಯಾಯ ಸಂಸ್ಕೃತಿಯನ್ನು ಬಯಸುವವರು ಹಾಗೂ ಆಧುನೀಕರಣ ತಂದೊಡ್ಡಿದ್ದ ಯಜಮಾನಿ ಸಂಸ್ಕೃತಿಯನ್ನು ತಿರಸ್ಕರಿಸುವ ಮೂಲಕ ತಮ್ಮ ಮೂಲ ಬೇರುಗಳನ್ನು ಹುಡುಕುವ ಹಂಬಲವನ್ನು ಕಾಣಬಹುದು.

**ಕೊನೆಟಿಪ್ಪಣಿ**

೧. ಸಾಂಸ್ಕೃತಿಕ ಅಧ್ಯಯನ, ರಹಮತ್ ತರೀಕೆರೆ, ಸಾಹಿತ್ಯ ಅಕಾಡೆಮಿ; ಪುಟ ಸಂಖ್ಯೆ–೨೩

೨. ಅದೇ, ಪುಟ–೩೪

೩. ಕನ್ನಡ ಸಂಶೋಧನೆ ತಾತ್ವಿಕ ವಿಚಾರ, ರಹಮತ್ ತರೀಕೆರೆ, ಕನ್ನಡ ವಿಶ್ವವಿದ್ಯಾಲಯ, ಪುಟ ಸಂಖ್ಯೆ–೬

೪. ಸಾಂಸ್ಕೃತಿಕ ಅಧ್ಯಯನ, ರಹಮತ್ ತರೀಕೆರೆ, ಸಾಹಿತ್ಯ ಅಕಾಡೆಮಿ, ಪುಟ ಸಂಖ್ಯೆ–೯

೫. ಸಮಗ್ರ ಕಾವ್ಯ, ಗೋಪಾಲಕೃಷ್ಣ ಅಡಿಗ, ಸ್ವಪ್ನ ಬುಕ್ ಹೌಸ್, ಪುಟ–೬೭

೬. ಅದೇ, ಪುಟ – ೨೨೫

೭. ಅದೇ, ಪುಟ – ೨೨೫, ೨೨೬

೮. ಅದೇ, ಪುಟ – ೨೮೩

೯. ಅದೇ, ಪುಟ – ೨೮೩

೧೦. ಅದೇ, ಪುಟ – ೩೦೫

೧೧. ಅದೇ, ಪುಟ – ೩೦೫

೧೨. ಅದೇ, ಪುಟ – ೨೭೮

೧೩. ಯು.ಆರ್.ಅನಂತಮೂರ್ತಿ ಅವರ ಆಯ್ದ ಬರಹಗಳು, ಯು.ಆರ್.ಅನಂತಮೂರ್ತಿ, ಅಕ್ಷರ ಪ್ರಕಾಶನ, ಪುಟ ಸಂಖ್ಯೆ – ೧೨

೧೪. ಅದೇ, ಪುಟ – ೧೩

## ಅಧ್ಯಾಯ – ೩

## ಲಂಕೇಶ್ ಕಾವ್ಯದ ವಸ್ತುವಿನ ಚಹರೆಗಳು

ಲಂಕೇಶ್ ಕಾವ್ಯವನ್ನು ಪ್ರವೇಶಿಸುವುದಕ್ಕೂ ಮೊದಲು ಕಾವ್ಯ, ಕವಿಯ ಬಗೆಗಿನ ಅವರ ಅಭಿಪ್ರಾಯ ತಿಳಿಯುವುದು ಮುಖ್ಯವೆನಿಸುತ್ತದೆ. ಕಾವ್ಯ ಕಟ್ಟುವ ಕಲೆಯ ಬಗ್ಗೆ, ಕವಿಯ ಅನುಭವ, ಓದುಗನು ಅರಿಯದ ಅನುಭವ ರೂಪಗಳ ಹತ್ತಿರಕ್ಕೆ ಅವನನ್ನು ಕರೆದೊಯ್ಯುವುದರ ಬಗ್ಗೆ, ಬದಲಾಗುತ್ತಿರುವ ಕಾವ್ಯದ ಆಶಯಗಳ ಬಗ್ಗೆ 'ಅಕ್ಷರ ಹೊಸ ಕಾವ್ಯದ' ಮುನ್ನುಡಿಯಲ್ಲಿ ಹೇಳುತ್ತಾ, "ಕವಿಯು ಬದುಕುವ, ಅವರ ಅನುಭವಗಳಲ್ಲಿ ಪಾಲ್ಗೊಳ್ಳುವ, ಅವರಂತೆಯೇ ಸಂಭಾಷಣೆ, ಜಗಳ, ತಮಾಷೆ, ವ್ಯಂಗ್ಯ ಎಲ್ಲಕ್ಕೆ ಭಾಷೆ ಬಳಸುವ, ಅನುಭವವೆಲ್ಲದನ್ನೂ ತನ್ನ ಮನಸ್ಸಿನ ಒರೆಗೆ ಹಚ್ಚಿ ನೋಡುವ, ಎಲ್ಲರಿಗಿಂತ ಹೆಚ್ಚು ಮಟ್ಟಗಳಲ್ಲಿ ನೋಡಿದರೂ ಅದನ್ನು ಎಲ್ಲರೂ ಬಲ್ಲಂಥ ಆಡುಮಾತು, ಆಸಕ್ತಿ, ಕುತೂಹಲ, ಜಾಣತನದ ಮೂಲಕ ಓದುಗನಿಗೆ ಹೇಳುವ ಶಕ್ತಿ ಪಡೆದುಕೊಳ್ಳುತ್ತಾನೆ"[1]

ಎಲ್ಲರಂತೆ ಕವಿಯು ಅನುಭವವನ್ನು ಪಡೆಯುತ್ತಾನೆ, ಪಡೆದ ಅನುಭವವನ್ನು ಕಾವ್ಯ ಕಟ್ಟುವ ಕಲೆಯ ಮೂಲಕ ಇತರರಿಗಿಂತ ಭಿನ್ನ ನೆಲೆಯಲ್ಲಿ ನಿಲ್ಲುತ್ತಾನೆ. ಓದುಗರಿಗೆ ಕುತೂಹಲವನ್ನು ಕೆರಳಿಸುವಲ್ಲಿ ಆತನ ಜಾಣತನ ಕಂಡುಬರುತ್ತದೆ. ಉತ್ತಮ ಕಾವ್ಯ ಹೇಗಿರಬೇಕು ಎನ್ನುವುದಕ್ಕೆ ಈ ಮಾತುಗಳು ಸಾಕ್ಷಿಯಾಗಿವೆ.

ಕವನದ ಆಶಯಗಳ ಬಗ್ಗೆ ಹೇಳುತ್ತಾ "ಜೀವಂತ ಕಾವ್ಯವಿಲ್ಲದ ಜೀವಂತ ಜನಾಂಗವಿಲ್ಲವೆಂಬ ನನ್ನ ನಂಬಿಕೆಗೆ ಇಲ್ಲಿಯ ಕವನಗಳು ಆಧಾರವಾಗಬೇಕು; ಈ ಸಂಗ್ರಹ ಕೆಲವು ಉತ್ತಮ ಕವನಗಳ ಗುಂಪು ಮಾತ್ರ ಅಲ್ಲದೆ ನನ್ನ ತಲೆಮಾರಿನ ಕನ್ನಡ ಭಾಷೆಯ ಸೂಕ್ಷ್ಮತೆ, ಸೊಗಸನ್ನು ನನ್ನ ಜನಾಂಗದ ಜನರ ಜಾಣತನ, ಕಿಡಿಗೇಡಿತನ, ಪ್ರತಿಭಟನೆ, ಸೃಷ್ಟ್ಯಾತ್ಮಕ ಪ್ರತಿಭೆಯನ್ನು ತೋರಬೇಕು; ಹೊಸ ಕಾವ್ಯ ಕೇವಲ ದುರಂತಮಯವಾದದ್ದು, ಕ್ಲಿಷ್ಟವಾದದ್ದು, ಲೈಂಗಿಕವಾದದದ್ದು, ಸಿನಿಕತನದ್ದು ಎಂಬಂಥ ತಪ್ಪು ತಿಳಿವಳಿಕೆಯನ್ನು ಕೊಂಚವಾದರೂ ನಿವಾರಿಸಬೇಕು; ಇವು ನನ್ನ ಆಸೆಗಳಲ್ಲಿ ಕೆಲವು"[2]

ಇಂತಹ ಆಸೆಗಳನ್ನು ಹೊಂದಿದಂಥ ಲಂಕೇಶ್ ಇತರ ಯುವ ಕವಿಗಳಿಂದ ಆಶಿಸುತ್ತಿದ್ದ ಅಂಶಗಳನ್ನು, ತಮ್ಮಲ್ಲೂ ತೊಡಗಿಸಿಕೊಂಡಿದ್ದರು. ಆದ್ದರಿಂದಲೇ ಇವರ ಕವಿತೆಗಳು ನವ್ಯತೆ ಜೊತೆ ಜೊತೆಗೆ ಆ ಚೌಕಟ್ಟನ್ನೂ ಮೀರಿ ಪ್ರತಿಭಟನೆ, ಸಾಮಾಜಿಕ ಕಳಕಳಿ, ಹೆಣ್ಣಿನ ಪ್ರಧಾನೀಕರಣ, ತನ್ನ ಜನರ ಸಾಚತನ, ಕಿಲಾಡಿತನವನ್ನು ಹೇಳುವಂತದ್ದಾಗಿದೆ.

ಈ ರೀತಿಯಾಗಿ ವ್ಯಕ್ತಿಗತ ನೆಲೆಯಿಂದ ಸಾಮಾಜಿಕದ ಕಡೆಗೆ ಇವರ ಕಾವ್ಯ ಹೊರಳುತ್ತದೆ. ನವ್ಯತೆಯ ಚೌಕಟ್ಟನ್ನು ಮೀರಿ, ನವ್ಯದಿಂದ ನವ್ಯೋತ್ತರದ ಕಡೆಗೆ ಲಂಕೇಶರ ಕಾವ್ಯ ಚಲಿಸುತ್ತದೆ. ಇವರ

ಸಾಹಿತ್ಯದ ಮುಖ್ಯ ಕಾಳಜಿ ಇರುವ ಸಮಾಜವನ್ನು ಇರುವ ರೀತಿಯಲ್ಲೇ ಚಿತ್ರಿಸುತ್ತಾ ಕಟುವಿಮರ್ಶೆಗೆ ಒಳಪಡಿಸುವುದು. ಪ್ರಸ್ತುತದಲ್ಲಿ ಕಂಡದ್ದನ್ನು ಕಂಡಹಾಗೆ ಖಂಡಿಸಿ ಬರೆಯುವುದನ್ನು ಕಾಣಬಹುದು. ಹೀಗೆ ಇವರ ಸಾಹಿತ್ಯಪ್ರಜ್ಞೆ ವಿಸ್ತಾರಗೊಳ್ಳುವುದನ್ನು 'ಬಿಚ್ಚು', 'ತಲೆಮಾರು' ೧೯೮೦ರಿಂದೀಚೆಗೆ ಬರೆದ ಕವನಗಳು ಹಾಗೂ 'ನೀಲು' ಕವನಗಳಲ್ಲಿಯೂ ಕಾಣಬಹುದು.

ಲಂಕೇಶರ ಒಟ್ಟು ಕಾವ್ಯವನ್ನು ಗಮನಿಸಿದಾಗ ಅಲ್ಲಿ ನಗರ–ಗ್ರಾಮಗಳ ನಡುವಿನ ವೈರುಧ್ಯ, ಸಂಬಂಧಗಳ ನಡುವೆ ಬಿರುಕು, ರಾಷ್ಟ್ರ, ರಾಜಕೀಯ, ವಿಕ್ಷಿಪ್ತತೆ, ಗಂಡು–ಹೆಣ್ಣಿನ ಮನಸ್ಸು–ದೇಹಗಳ ನಡುವಿನ ದ್ವಂದ್ವ, ವ್ಯಕ್ತಿತ್ವಗಳು, ವ್ಯಕ್ತಿಪರೀಕ್ಷೆ, ಪ್ರತಿಭಟನೆ ಜೊತೆಗೆ ಪರಂಪರೆಗೆ ಆತುಕೊಂಡು ಪ್ರಸ್ತುತಕ್ಕೆ ಹತ್ತಿರವಾಗುತ್ತದೆ. ಹೀಗೆ ವಸ್ತುಗಳು ಭಿನ್ನವಾದರೂ ಅವು ಸಮಾಜದ ವ್ಯಕ್ತಿಗಳ ಭಿನ್ನ ಮುಖಗಳನ್ನು ಬೂಟಾಟಿಕೆತನವನ್ನು, ಎಡಬಿಡಂಗಿ ಸಂಸ್ಕೃತಿಯನ್ನು ಹೇಳುತ್ತಾ ಉತ್ತಮ ಸಮಾಜವನ್ನು ಬಯಸುವಂತದ್ದಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ಇವರ ಒಟ್ಟು ಕಾವ್ಯವನ್ನು 'ಗ್ರಾಮ–ನಗರಗಳ ನಡುವಿನ ವೈರುದ್ಯ', 'ಸಾಮಾಜಿಕ ಕಳಕಳಿ', 'ಸ್ತ್ರೀ ಪಾತ್ರಗಳ ಚಿತ್ರಣ', ನಾಯಕನ ಚಹರೆಗಳ ಹಿನ್ನೆಲೆಯಲ್ಲಿ ಅಧ್ಯಯನವನ್ನು ಮಾಡಲಾಗಿದೆ.

ಒಬ್ಬ ವ್ಯಕ್ತಿಯಾಗಿ, ಬರಹಗಾರರಾಗಿ ಲಂಕೇಶ್ ಬೆಳೆದಂತೆಲ್ಲ ಕಾವ್ಯ ಶಕ್ತಿಯೂ ಅವರ ಆಳದಲ್ಲಿ ವಿಕಸನಗೊಳ್ಳುತ್ತಾ ನಡೆದದ್ದನ್ನು ಅವರ ಒಟ್ಟಾರೆ ಕಾವ್ಯದಲ್ಲಿ ಕಾಣಬಹುದು. ಲಂಕೇಶರು ಬಸವಣ್ಣ, ಅಡಿಗ, ಎಲಿಯಟ್, ಬೋದಿಲೇರ್, ನೆರೂಡ ಇವರೆಲ್ಲರಿಂದ ಪ್ರೇರಿತಗೊಂಡಿದ್ದರು. ಹಾಗಾಗಿ ಇವರ ಸಾಹಿತ್ಯ, ರಾಜಕೀಯ ಬದುಕು, ಸಮಕಾಲೀನ ಬದಲಾವಣೆಯ ಆಯಾಮಗಳಿಗೆ ಸ್ಪಂದಿಸುತ್ತಿತ್ತು. ಸಾಹಿತ್ಯ, ಧರ್ಮ, ದೇವರು, ರಾಜಕೀಯ ಹೀಗೆ ಮನುಷ್ಯನನ್ನು ಯಾವ ಯಾವ ಸಂಗತಿಗಳು ಜಡುಗಟ್ಟಿಸುತ್ತವೋ ಅದನ್ನು ತಿರಸ್ಕರಿಸುವುದು ಹಾಗೂ ಯಾವುದು ಚೈತನ್ಯವಾಗಿ ಜೀವಂತವಿರುತ್ತದೋ ಅದೇ ಏನೇ ಆಗಿರಲಿ ಮುಖ್ಯ ಎಂದು ನಂಬಿದ್ದರು. ಪಾರದರ್ಶಕ ಭಾಷೆ, ರಚನಾವಿಧಾನ, ರೂಪಕ, ಸಂಕೇತವೆಲ್ಲವನ್ನು ಬಳಸಿ ತಿಳಿಸಬೇಕಾದ ತಮ್ಮ ಅಭಿಪ್ರಾಯ, ಅನುಭವವನ್ನು ವಿಮರ್ಶಾತ್ಮಕವಾಗಿ ನೇರವಾಗಿ ಸಾಹಿತ್ಯದಲ್ಲಿ ಹೇಳುವುದನ್ನು ಕಾಣಬಹುದು.

### ೩.೧ ಗ್ರಾಮ-ನಗರಗಳ ನಡುವಿನ ವೈರುಧ್ಯ :-

ಗ್ರಾಮದ ಜನರಿಗೆ ಸಾಮಾನ್ಯವಾಗಿ ನಗರದ ಬಗ್ಗೆ ಇರುವ ಪ್ರಮುಖ ಭಯವೆಂದರೆ ಅವಮಾನದ್ದು. ನಗರದ ಥಳಕು ತಮ್ಮ ಗ್ರಾಮ್ಯ ಜೀವನವನ್ನು ಹೀಯಾಳಿಸುತ್ತದೆ ಎನ್ನುವ ಆತಂಕವಿರುತ್ತದೆ. ಆದರೆ ಲಂಕೇಶ್ ತಮ್ಮ ಕಾವ್ಯದಲ್ಲಿ ಇಂತಹ ವಿದ್ಯಾವಂತರ ಅಹಂಕಾರದ ಜ್ಞಾನವನ್ನು ಅವರ ದೊಡ್ಡಸ್ತಿಕೆಯನ್ನು ವೈಭವೀಕರಿಸದೆ ಹಳ್ಳಿಯ ಜನರ ಜಾಣತನವನ್ನು, ಅವರ ಸಾಚಾತನವನ್ನು ಚಿತ್ರಿಸುತ್ತಾರೆ.

ತಲೆಮಾರು, ಅಕ್ಕ-ತಮ್ಮ, ನಮ್ಮ ಕಡೆಯ ಜನ, ನನ್ನ ಸುತ್ತಾ, ಅವ್ವ ಕವನಗಳು ತಲೆಮಾರುಗಳ ಚರಿತ್ರೆಯನ್ನು ಹೇಳುವುದರ ಜೊತೆಗೇ ನಗರ ಸಂಸ್ಕೃತಿ ಮತ್ತು ಗ್ರಾಮೀಣ ಸಂಸ್ಕೃತಿಗಳನ್ನು ಮುಖಾಮುಖಿಯಾಗಿಸುತ್ತವೆ.

'ನಮ್ಮ ಕಡೆಯ ಜನ' ಕವಿತೆಯ ಈ ಸಾಲುಗಳು ನಗರ ಗ್ರಾಮ ವೈರುದ್ಯವನ್ನು ಹೀಗೆ ಸ್ಪಷ್ಟಪಡಿಸುತ್ತದೆ.

**"ಹುಚ್ಚು ಪೋಕರಿ, ಕೇಳು, ಬಿಟ್ಟುಬಿಡು ದೊಡ್ಡಸ್ತಿಕೆಯ**
**ಕೋಳಿಕತ್ತಿನ ಸೊಕ್ಕ, ಅಕ್ಷರದ ದೌಲತ್ತು;**
**ಇವರು ಸಹಾ ಘಾಟಿ ಜನ**
**ನಿನ್ನಾಣೆ; ಇವರಿಗಿದೆ ಗುಲಾಬಿ ಮುಳ್ಳಿನ ಕೆಚ್ಚು**
**ಸುತ್ತ ಸುಪ್ಪತ್ತಿಗೆಯ ಕೆಂಪುವಾಸನೆ**
**ಮತ್ತು ಮುಟ್ಟಿದರೆ ಚುರ್ರೆನುವ ಕಾಡುಕಿಚ್ಚು"**[3]

ನಗರ ಜನರ ಅಹಂಕಾರವನ್ನು, ಗ್ರಾಮೀಣ ಜನರ ಜಾಣತನವನ್ನು ಚಿತ್ರಿಸುತ್ತಾ, ವಿದ್ಯೆ ಕಲಿತಿದ್ದೇನೆ ಎಂದು ಮೆರೆಯುವವರನ್ನು ಟೀಕಿಸುತ್ತಿರುವುದನ್ನು ಕಾಣಬಹುದು. ಗ್ರಾಮೀಣ ಜನರು ಇವರಿಗೇನು ಕಡಿಮೆ ಇಲ್ಲದ ಅವರ ಸಾಚಾತನವನ್ನು ಚಿತ್ರಿಸುತ್ತಾರೆ. "ಹಣ್ಣು ಕಾಯಿಯ ಚೌಡಿ, ಕರಿಯವ್ವ ಹೋತ;" "ಆಯನೂರಿನ ಸಂತೆ ಭಾನುವಾರ" ಈ ಸಾಲುಗಳು ಗ್ರಾಮೀಣ ಜನರ ಸಂಸ್ಕೃತಿಯನ್ನು ಪರಿಚಯಿಸುತ್ತದೆ.

ತಲೆಮಾರಿನ ಚಿತ್ರಣವನ್ನು 'ತಲೆಮಾರು ಕವಿತೆ' ಕಥನ ಶೈಲಿಯಲ್ಲಿ ಬಿಚ್ಚಿಡುತ್ತದೆ. ಕವಿತೆ ಮೂರು ತಲೆಮಾರುಗಳ ಕತೆ ಹೇಳುತ್ತದೆ. ತನ್ನ ಅಜ್ಜ, ಅಪ್ಪನ ತಲೆಮಾರುಗಳ ಬದುಕಿನ ಶೈಲಿಯನ್ನು ಪರಿಚಯಿಸುತ್ತಾ ತನ್ನ ತಲೆಮಾರಿನ ಬದುಕಿನ ಶೈಲಿಯೊಂದಿಗೆ ನಾಯಕ ಮುಖಾಮುಖಿಗೊಳ್ಳುವ ಕ್ರಮವಿದೆ. ಹೀಗೆ ಕವಿತೆ ತಲೆಮಾರುಗಳ ಕತೆಯನ್ನು ಹೇಳುತ್ತಲೇ ಗಾಂಧೀ ಚಿಂತನೆಯನ್ನು ಹೇಳುತ್ತದೆ.

"ದಕ್ಷಿಣ ಆಫ್ರಿಕದ ದುರಂತ ದಾಟ
ಗಾಂಧಿ ಭಾರತಕ್ಕೆ ಬಂದದ್ದು
ಅರವತ್ತು ವರ್ಷಗಳ ಹಿಂದೆ,
ನನ್ನಪ್ಪ ಆಗ ತೊಟ್ಟಿಲ ಕೂಸು
ನನ್ನವ್ವ ಹುಟ್ಟಿರಲಿಲ್ಲ; ನನ್ನ ಬದುಕಿನ ಬಗ್ಗೆ
ಊಹೆ ಕೂಡ ಇರಲಿಲ್ಲ"

ಕವಿತೆ ನಿರೂಪಿತಗೊಂಡಿರುವುದೇ ಪುಟ್ಟ ಕತೆಯನ್ನು ಎಳೆಎಳೆಯಾಗಿ ಹೆಣೆಯುವುದರ ಮೂಲಕ. ಗಾಂಧಿ ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ೬೦ ವರ್ಷಗಳ ಹಿಂದೆ ಬಂದದ್ದು. ಆಗ ನಾಯಕನ ತಂದೆ ತೊಟ್ಟಿಲ ಕೂಸು ಆತನ ತಾಯಿ ಇನ್ನು ಹುಟ್ಟೇ ಇರಲಿಲ್ಲ. ಕವಿಯ ಬದುಕಿನ ಬಗ್ಗೆ ಊಹೆ ಕೂಡ ಇರಲಿಲ್ಲ. ಈತನ ಅಜ್ಜ ಹರಿಹರವನ್ನು ಬಿಟ್ಟು ಮಲೆನಾಡಿಗೆ ವಲಸೆ ಬಂದು ನೆಲೆಯೂರಲು ಪ್ರಾರಂಭಿಸಿದ್ದ ಹಾಗೂ ಭೂಮಿಯನ್ನು ಉಳುಮೆಮಾಡಿ ಸಂಸಾರವನ್ನು ಹೂಡಲು ಸಿದ್ಧರಾಗುತ್ತಿದ್ದರೆ ಅತ್ತ ಗಾಂಧಿ ಕ್ವಿಟ್ ಇಂಡಿಯಾ ಚಳುವಳಿ ಪ್ರಾರಂಭಿಸಿದ್ದರು. ಈ ಎರಡು ಸನ್ನಿವೇಶವನ್ನು ಗಮನಿಸಿದರೆ ಒಂದು ಕುಟುಂಬದ ಬೆಳವಣಿಗೆಯ ಜೊತೆಜೊತೆಗೆ ದೇಶದ ಬೆಳವಣಿಗೆಯನ್ನು ಕಾಣಬಹುದು. ಹಾಗೂ ಕವಿತೆಯಲ್ಲಿ ಸ್ವಾತಂತ್ರ್ಯಪೂರ್ವದ ಬದುಕನ್ನು, ಸ್ವಾತಂತ್ರ್ಯೋತ್ತರದ ಬದುಕನ್ನು ತಲೆಮಾರುಗಳ ಅಂತರದಲ್ಲಿ ಹೇಳಲಾಗಿದೆ. ಇಲ್ಲಿ ಬರುವ ಹಳ್ಳಿ ಸ್ವಾತಂತ್ರ್ಯದ ಹಿಂಚು ಮುಂಚಿನ ಹಳ್ಳಿ, ನಂತರದಲ್ಲಿ ಹಳ್ಳಿಯ ಬದುಕಿನ ಸಾಂಪ್ರದಾಯಿಕ ಸ್ಥಿರತೆಯ ಮೂಲಗಳು ಕಣ್ಮರೆಯಾಗಲು ಪ್ರಾರಂಭವಾಗುವುದರ ಚಿತ್ರಣವಿದೆ. ಅದು ನಾಯಕನ ಮೂಲಕ ಹೀಗೆ ವ್ಯಕ್ತವಾಗುತ್ತದೆ.

"ಈಗ ಬರೆಯುವ ಕೋಣೆಯಲ್ಲಿ ನಿಂತು
ಯೋಚಿಸಿದೊಡನೆ ತಲೆಮಾರುಗಳ ನೆನಪು;
-------------------------
ಎಲ್ಲೋ ಮೂಲೆಯಲ್ಲಿ ಮೂಡುತ್ತಿದೆ ಕ್ರಾಂತಿ
ಎಂಬ ಭ್ರಾಂತಿ"

ಕವಿತೆ ಬದುಕಿನ ತಹತಹವನ್ನು, ಜಡತೆ-ಜೀವಂತಿಕೆಯನ್ನು ನಾಯಕನ ಮೂಲಕ ವ್ಯಕ್ತಪಡಿಸುತ್ತದೆ. ನಾಯಕ ವರ್ತಮಾನದಲ್ಲಿ ನಿಂತು ತನ್ನ ಭೂತವನ್ನು ನೋಡುತ್ತಲೇ, ಜಡಗೊಂಡಿರುವ ವ್ಯವಸ್ಥೆಯನ್ನು, ಚಲನೆಯೇ ಇಲ್ಲದ ಸ್ಥಿತಿಯನ್ನು, ಸಮಾಜದಲ್ಲಿನ ಅಧಿಕಾರಿಗಳ ಬೇಜವಾಬ್ದಾರಿತನವನ್ನು ಹೇಳುತ್ತಿದೆ. ಕ್ರಾಂತಿ ನಡೆಯುತ್ತಿದೆ ಎಂದು ಭ್ರಮೆಯಲ್ಲಿರುವ ಸಮಾಜವನ್ನು ಎಚ್ಚರಿಸುವ ತವಕವಿದೆ. ಈ ಕವನ

ಎಪ್ಪತ್ತರ ದಶಕದಲ್ಲಿ ರಚನೆಯಾಗಿದ್ದರೂ ಅದನ್ನು ಮೀರಿ ಪ್ರಸ್ತುತವಾಗಿದೆ. ಅವ್ವ ಕವಿತೆಯೂ ಅವ್ವನ ದಿನನಿತ್ಯದ ಬದುಕನ್ನು ಹೇಳುತ್ತಾ ಹೇಳುತ್ತ ಗ್ರಾಮೀಣ ಜನರ ಬದುಕನ್ನು ಪರಿಚಯಿಸುತ್ತದೆ.

**"ನನ್ನವ್ವ ಫಲವತ್ತಾದ ಕಪ್ಪುನೆಲ**
**ಅಲ್ಲಿ ಹಸಿರು ಪತ್ರದ ಹರವು, ಬಿಳಿಯ ಹೂಹಬ್ಬ;**
**ಸುಟ್ಟಷ್ಟು ಕಸುವು, ನೊಂದಷ್ಟು ಹೂಹಣ್ಣು**
**ಮಕ್ಕಳೊದ್ದರೆ ಅವಳ ಅಂಗಾಂಗ ಪುಲಕ;**
**ಹೊತ್ತ ಬುಟ್ಟಿಯ ಇಟ್ಟು ನರಳಿ ಎವೆ ಮುಚ್ಚಿದಳು ತೆರೆಯದಂತೆ"**[5]

ಅವ್ವನನ್ನು ಫಲವತ್ತಾದ ಕಪ್ಪುನೆಲಕ್ಕೆ ಹೋಲಿಸಲಾಗಿದೆ. ಆಕೆ ಪ್ರಕೃತಿಯಂತೆ, ಯಾವ ಲಾಭವನ್ನು ನಿರೀಕ್ಷಿಸದೇ ತನ್ನ ಕುಟುಂಬಕ್ಕಾಗಿ ದುಡಿಯುವವಳು. ಶ್ರಮಿಕ ಜೀವನದ ಸಂಕೇತ ಆಕೆ. ಹೊಲದಲ್ಲಿ, ಮನೆಯಲ್ಲಿ ಸದಾ ದುಡಿಯುವಾಕೆ, ಇಂತಹ ಅವ್ವನನ್ನು ಕವಿ ಸಿದ್ಧಮಾದರಿಯ ಪುರಾಣ ಪ್ರಸಿದ್ಧರಾದ ಹೆಣ್ಣುಗಳಿಗೆ ಹೋಲಿಸಲು ಇಷ್ಟಪಡುವುದಿಲ್ಲ. ಈಕೆ ಈ ಎಲ್ಲಾ ಸ್ತ್ರೀಯರಿಗಿಂತಲೂ ವಿಶಿಷ್ಟವಾದಂತಹವಳು. ಇಂತಹ ತಾಯಿಯನ್ನು ಸತಿ ಸಾವಿತ್ರಿ, ಜಾನಕಿ, ಊರ್ಮಿಳೆಗೆ ಹೋಲಿಸುವುದು ಸರಿಯಲ್ಲ ಎಂದು ಹೇಳುತ್ತಾರೆ.

**"ಬನದ ಕರಡಿಗೆ ನಿಮ್ಮ ಭಗವದ್ಗೀತೆ ಬೇಡ;**
**ನನ್ನವ್ವ ಬದುಕಿದ್ದು**
**ಕಾಳುಕಡ್ಡಿಗೆ, ದುಡಿತಕ್ಕೆ, ಮಕ್ಕಳಿಗೆ;**
**ಮೇಲೊಂದು ಸೂರು, ಅನ್ನ, ರೊಟ್ಟಿ, ಹಚಡಕ್ಕೆ**
**ಸರೀಕರ ಎದುರು ತಲೆಯೆತ್ತಿ ನಡೆಯಲಿಕ್ಕೆ"**[6]

ತಾಯಿಯನ್ನು 'ಬನದ ಕರಡಿಯ ಹಾಗೆ' ಎಂದು ಹೇಳುವಲ್ಲಿ ವ್ಯಂಗ್ಯ ಕಾಣಬಹುದು. ಹಸಿದವರಿಗೆ ಅನ್ನ ಬೇಕೆ ಹೊರತು ಭಗವದ್ಗೀತೆಯಲ್ಲ. ಆಕೆ ಜೀವಿಸಿದ್ದು ಮೂಲಭೂತ ಸೌಕರ್ಯಗಳಿಗೆ, ಸರಳ ಜೀವನಕ್ಕೆ ಅದು ಎಲ್ಲವೂ ತನ್ನ ಕುಟುಂಬಕ್ಕಾಗಿ ಹೊರತು ತನಗಾಗಿ ಅಲ್ಲ. ಇಂತಹ ತಾಯಿ ಬೈಯ್ಯುವುದು, ಗೊಣಗುವುದು, ಜಗಳವಾಡುವುದು, ಕೊಂಕು, ಸಣ್ಣತನ ಎಲ್ಲವು ಮನೆಯ ಉದ್ಧಾರಕ್ಕೆ ಹೊರತು ತನ್ನ ಸ್ವಾರ್ಥಕ್ಕಾಗಿ ಅಲ್ಲ. ಮಗ ಅಡ್ಡದಾರಿ ಹಿಡಿದರೆ, ಗಂಡ ಬೇರೆ ದಾರಿ ಹಿಡಿದರೆ ಅವರನ್ನು ಸರಿದಾರಿಗೆ ತರುವುದಕ್ಕಾಗಿ ಸಿಟ್ಟಿನಿಂದ ಕೂಗಾಡುತ್ತಾಳೆ. ಹೀಗೆ ಬದುಕಿದ ಅವ್ವ "ಮನೆಯಿಂದ ಹೊಲಕ್ಕೆ ಹೋದಂತೆ ತಣ್ಣಗೆ ಮಾತನಾಡುತ್ತಲೇ ಹೊರಟು ಹೋಗುತ್ತಾಳೆ" ಇಲ್ಲಿ ಆಕೆ ಯಾವ ತಲ್ಲಣಗಳಿಲ್ಲದೆ, ಸಾವಿಗೆ ಅಂಜದೆ, ಬದುಕಿನ ಭ್ರಮೆಗಳನ್ನು ಇಟ್ಟುಕೊಳ್ಳದೇ ಮನೆಯಿಂದ ಹೊಲಕ್ಕೆ ಹೋದಷ್ಟು ಸಹಜವಾಗಿ ತಣ್ಣನೆ ಮಾತನಾಡುತ್ತಲೇ ಹೊರಟು ಹೋಗಿದ್ದಾಳೆ. ಇಲ್ಲಿ ಅವ್ವ ಬದುಕಿಗಾಗಿ ಹೋರಾಡಿ

ಸತ್ತು ಬದುಕಿದ್ದಾಳೆ. ಇಲ್ಲಿ ತಾಯಿಯ ವ್ಯಕ್ತಿತ್ವವನ್ನು ಪರಿಚಯಿಸುತ್ತಾರೆ. ಹೀಗೆ ತನ್ನ ತಾಯಿಯ ಜೀವನಶೈಲಿಯನ್ನು ಹೇಳುತ್ತಾ ಗ್ರಾಮೀಣ ಹೆಣ್ಣಿನ ಜೀವನ ಚಿತ್ರಣವನ್ನು ಕಟ್ಟಿಕೊಡುತ್ತಾರೆ. ಆದರೆ ಅದೇ ಅವ್ವನನ್ನು ಇಪ್ಪತ್ತೈದು ವರ್ಷದ ನಂತರ ನೋಡುವ ಕ್ರಮವೇ ಬೇರೆಯಾಗಿದೆ.

ಅವ್ವ-೨ರಲ್ಲಿ ಬರುವ ನಾಯಕ ತನ್ನ ತಾಯಿಯ ನೆನಪನ್ನು ಮೆಲಕು ಹಾಕುತ್ತಿದ್ದಾನೆ. ತನ್ನ ತಾಯಿಯ ಮುಗ್ಧತೆ, ಅವಳ ವಾತ್ಸಲ್ಯವನ್ನು ನೆನಪಿಸಿಕೊಳ್ಳುತ್ತಿದ್ದಾನೆ.

**"ಈ ಅವ್ವ ನನ್ನಲ್ಲಿ ಎಷ್ಟು ಉಳಿದಿದ್ದಾಳೆ**
**ಎಂದು ನೋಡಿಕೊಳ್ಳುತ್ತೇನೆ"[೮]**

ಈತ ನಗರ ಜೀವನದಲ್ಲಿ ಕಳೆದುಹೋಗಿರುವವನು ತನ್ನ ತಾಯಿಯ ನೆನಪನ್ನು ಯಾವುದೋ ಮೂಲೆಗೆ ತಳ್ಳಿ ಈಗ ಬೆದಕುತ್ತಿದ್ದಾನೆ. ಲಂಕೇಶರ ಸೃಜನಶೀಲತೆಗೆ ಈ ಕವಿತೆಗಳು ಸಾಕ್ಷಿಯಾಗಿವೆ.'ಅವ್ವ' ಕವಿತೆಯು ಸ್ತ್ರೀ-ವಾದಿಗಳಿಗೆ ಉತ್ತಮ ಆಧಾರ ಎಂದೇ ಹೇಳಬಹುದು. ಅದೇನೇ ಇದ್ದರೂ ಹೊಸಗನ್ನಡದ ಕಾವ್ಯ ಲೋಕದಲ್ಲಿ ಶ್ರೇಷ್ಠ ಕವನಗಳ ಸಾಲಿನಲ್ಲಿ ನಿಲ್ಲುವ ಕವಿತೆಗಳಲ್ಲಿ ಅವ್ವ ಕವಿತೆಯೂ ಒಂದು. ಆದ್ದರಿಂದಲೇ ಏನೋ ಲಂಕೇಶರ ಇತರ ಕವನಗಳಿಗಿಂತ ಅವ್ವ ಹಲವು ವಿಮರ್ಶಕರ ಮನಸ್ಸನ್ನು ಸೆಳೆದದ್ದು.

ಹಾಲತಿ ಸೋಮಶೇಖರ್ ಹೇಳುವಂತೆ, "ಗ್ರಾಮೀಣ ಪರಿಸರದಲ್ಲಿ ತನ್ನ ತಾಯಿ ಕಾಣಿಸಿದ ಬೇಸಾಯದ ಪ್ರತೀಕಗಳು, ಗ್ರಾಮೀಣ ಸಂಕೇತಗಳು, ಕುಟುಂಬದ ಪೀಳಿಗೆಯ ವಿಕಾಸದ ಸಂಕೇತಗಳಾಗಿ ಮೂಡಿಬಂದಿವೆ. ಲಂಕೇಶರ 'ಅವ್ವ', 'ಅವ್ವ-೨' ಈ ಮಾತಿಗೆ ನಿದರ್ಶನಗಳು. ಇಲ್ಲಿನ ಅವ್ವ ಒಡಲಾಳದ ಸಾಕವ್ವನಂತೆ ಕುಟುಂಬವನ್ನು ಪೊರೆಯುವುದೇ ಕ್ರಾಂತಿ. ಅವ್ವನ ವ್ಯಕ್ತಿತ್ವ ಶೋಧ ಮಾಡುತ್ತ, ನಿರೂಪಕನ ಧ್ಯೇಯಾದರ್ಶನಗಳನ್ನು ಅನಾವರಣಗೊಳಿಸುತ್ತಾ, ವ್ಯಕ್ತಿತ್ವದ ಒಳ ಪಾತಾಳಗಳನ್ನು ಕಾಣಿಸುತ್ತ, ತಾಯ್ತನದ ಎಲ್ಲ ಭಾವನಾಮಯತೆಗಳನ್ನು ಕಿತ್ತೆಸೆದು ಗಂಭೀರವಾಗಿ ನೋಡುವುದು ಅವರ ಸ್ವಭಾವ. ಇದು ಬಹಳ ನಿರ್ಭೀಡೆಯ ಸ್ವವಿಮರ್ಶೆ, ವೈಚಾರಿಕತೆ, ಕೊಂಚ ತಾಯ್ತನದ ವಿನಯ ಮತ್ತು ಮೌನವನ್ನು ಪ್ರದರ್ಶಿಸುವ ವಸ್ತುನಿಷ್ಠವಾದ ಅನುಸಂಧಾನ ಅವರ 'ಅವ್ವ' ಪದ್ಯ. ಲಂಕೇಶರ ಕವಿತೆಗಳಲ್ಲಿ ಶ್ರಮಿಕ ಪ್ರಜ್ಞೆ, ಜಾತಿಪ್ರಜ್ಞೆ, ಸಮಾಜಪ್ರಜ್ಞೆಗಳು, ರೂಕ್ಷ ಸ್ಥಿತಿಯಲ್ಲಿ ಬರುವುದನ್ನು ಕಾಣುತ್ತೇವೆ. "ಈಕೆ ಉರಿದೆದ್ದಾಳು, ಮಗ ಕೆಟ್ಟರೆ, ಗಂಡ ಬೇರೆಡೆ ಹೋದಾಗ" ಹೀಗೆ ಮನೆ-ಮನೆತನದ ವಾರಸುದಾರಳಾಗಿ ಶ್ರಮಿಕ ಪ್ರಜ್ಞೆಯ ಪ್ರತೀಕವಾಗಿ ಅವ್ವ ಬಂದಿದ್ದಾಳೆ"[೯]

ಕೆ.ಮರುಳಸಿದ್ದಪ್ಪ ಹೇಳುವಂತೆ "ಆಕೆ ಸತ್ತಾಗ ಲಂಕೇಶ್ ಬರೆದ ಕವಿತೆ ಆಧುನಿಕ ಕನ್ನಡ ಕಾವ್ಯ ಪರಂಪರೆಯಲ್ಲಿ ಒಂದು ಶ್ರೇಷ್ಠ "ಶೋಕಗೀತೆ"[ELEGY] ಎಂಬುದಾಗಿ ಪ್ರಸಿದ್ಧಿ ಹೊಂದಿದೆ. ತಮ್ಮ ತಾಯಿಯ ಬಗೆಗಿದ್ದ ಪ್ರೀತಿ, ಅದಕ್ಕೆ ಪ್ರತಿಯಾಗಿ ಅವಳಿಗೆ ಏನನ್ನೂ ಕೊಡಲಾರದ್ದಕ್ಕೆ ದುಗುಡ, ನೋವು- ಎಲ್ಲ ಕಾಲದ ಮಕ್ಕಳ ತುಡಿತವನ್ನು ಪ್ರತಿನಿಧಿಸುವಂತಿದ್ದು, ಗ್ರಾಮೀಣ ತಾಯ್ತನಕ್ಕೆ ಒಡ್ಡಿದ

ಸಮರ್ಥ ಪ್ರತಿಮೆಯಂತಿದೆ. ಸಾಲಿನಿಂದ ಸಾಲಿಗೆ ಚಿತ್ರವತ್ತಾಗಿ ಬೆಳೆಯುತ್ತಾ, ನಾಟಕೀಯ ಸಂವಾದಗಳ ಮೂಲಕ ಓದುಗನನ್ನು ಚಕಿತಗೊಳಿಸುತ್ತ ಸಾಗುವ ಈ ಕವಿತೆ, ನಾಗರಿಕ ಜಗತ್ತಿನ ವಿಮರ್ಶೆ, ಗ್ರಾಮೀಣ ಬದುಕಿನ ವೈಭವೀಕರಣದೊಂದಿಗೆ ಸ್ವವಿಮರ್ಶೆ ಒಳನೋಟಗಳಿಂದ ಕೂಡಿ ಧ್ವನಿಪೂರ್ಣವಾಗಿದೆ"[೧೦] ಎನ್ನುತ್ತಾರೆ.

'ಅಕ್ಕ-ತಮ್ಮ' ಕವಿತೆಯು ಹಳ್ಳಿಯ ಮುಗ್ಧ ಹುಡುಗನ ದೃಷ್ಟಿಯಲ್ಲಿ ನಿರೂಪಿತವಾಗಿದೆ. ತನ್ನ ಅಕ್ಕ ಸರಿಯಿಲ್ಲ ಎನಿಸಿದಾಗ ತಮ್ಮನೊಬ್ಬನ ನಡವಳಿಕೆಗಳು ಗಾಢವಾಗಿ ಹೊರಬರುತ್ತದೆ. ಗದ್ದೆಯಲ್ಲಿ ಗುದ್ದಾಡಿ ರಂಗಯ್ಯನಿಂದ "ನಿನ್ನಕ್ಕನ ರಾತ್ರಿ ಕಳಿಸು" ಎನಿಸಿಕೊಂಡು ಬಂದ ತಮ್ಮ 'ಹಾಳಾಗು ಕತ್ತೆ ಹಂದಿ ನಾಯಿ' ಎಂದು ಅಕ್ಕನಿಗೆ ಬೈದು ಮುಸು ಮುಸು ಅಳುತ್ತಾನೆ. ಆ ಮನಸ್ಥಿತಿ ಅಂಬೆಗಾಲಿಡುವ ಅಕ್ಕನ ಮಗುವನ್ನೂ ಎತ್ತಿಕೊಳ್ಳದಂತೆ ಮಾಡುತ್ತದೆ. ಆದರೆ

"ಅಕ್ಕ ಬೆವರು ಸುರಿಸಿ ಅರಳಿಸಿದ ಸಂಪಿಗೆ ಘಮ್ಮೆಂದಾಗ
ಹಸಿರು ಹಾವಿನ ಹಾಗೆ" ಸುತ್ತಾಡಿ ಬರುತ್ತಾನೆ. ಕಡೆಗೆ"[೧೧]

ಅಕ್ಕನ ಕಳಿಸಿ ಬಾ ಎಂದ ಅಪ್ಪನ ಮಾತಿನಂತೆ ಗಾಡಿ ಓಡಿಸುತ್ತ ಯಜಮಾನನಂತೆ ಅಕ್ಕನನ್ನು ಬಿಟ್ಟು ಬರುವಾಗ "ನನ್ನನ್ನು ಇಲ್ಲಿ ಬಿಡಬೇಡ" ಎಂದು ತಮ್ಮನನ್ನು ಅಪ್ಪಿಕೊಂಡು ಅತ್ತ ಅಕ್ಕ. ಅಪ್ಪ ಮತ್ತು ಅಕ್ಕನ ಕಣ್ಣೀರು ತಮ್ಮನ ನಾಚಿಕೆಗೆ ಕಾರಣವಾಗುತ್ತದೆ. ಹೀಗೆ ಮಾನವ ಸಂಬಂಧಗಳ ನಡುವಿನ ಬಿರುಕನ್ನು, ಸಾಂಪ್ರದಾಯಿಕ ಸಂಬಂಧಗಳಲ್ಲಿ ಕಂಡುಬರುವ ಬಿಗುವನ್ನು ಬಾಲ್ಯದ ಕಾಲದಿಂದಲೇ ನಿರ್ಮಾಣವಾಗುವುದನ್ನು ಕವಿತೆ ಬಿಚ್ಚಿಟ್ಟೋರಿಸುತ್ತದೆ.

ಇಲ್ಲಿ ಬರುವ ನಿರೂಪಕ ತನ್ನ ಅಕ್ಕನ ಮೇಲೆ ಪಡುವ ಸಂಶಯ ಅವನಲ್ಲೇ ಮೂಡುವ ಗೊಂದಲ, ದ್ವಂದ್ವ ಯಾವುದಕ್ಕೂ ಉತ್ತರವಿಲ್ಲದ ಸ್ಥಿತಿಯಲ್ಲಿ ನಿಲ್ಲುತ್ತಾನೆ. ಇಂತಹ ನಾಯಕರು ಲಂಕೇಶರ ಒಟ್ಟು ಸಾಹಿತ್ಯದಲ್ಲಿ ಪದೇ ಪದೇ ಕಾಣಸಿಗುತ್ತಾರೆ. 'ಅಕ್ಕ – ತಮ್ಮ' ಕವಿತೆಯಲ್ಲಿ ಬರುವ ತಮ್ಮನ ಚಿತ್ರಣವನ್ನು ಅವರು ಆನಂತರ ಬರೆದ 'ಅಕ್ಕ' ಕಾದಂಬರಿಯ ಕ್ಯಾತನಲ್ಲಿ ಕಾಣಬಹುದು. ಈ ಕಾದಂಬರಿಯು ಕ್ಯಾತನೆಂಬ ಹುಡುಗನ ಮೂಲಕ ಲೋಕವನ್ನು ಹಾಗೂ ಆ ಲೋಕ ತನ್ನ ಅಕ್ಕನನ್ನು ನಡೆಸಿಕೊಳ್ಳುವ ರೀತಿಯನ್ನು ಚಿತ್ರಿಸುತ್ತದೆ. 'ಉಮಾಪತಿಯ ಸ್ಕಾಲರ್‌ಶಿಪ್' ಕತೆಯಲ್ಲಿಯೂ ಅಕ್ಕ-ತಮ್ಮರ ಸಂಬಂಧದ ಚಿತ್ರಣವನ್ನು ಕಾಣಬಹುದು. ಹೀಗೆ ಲಂಕೇಶರು ತಮ್ಮ ಸಾಹಿತ್ಯದಲ್ಲಿ ಅಕ್ಕ-ತಮ್ಮ ಸಂಬಂಧಗಳಲ್ಲಿ ಕಾಣುವ ಅನುಕಂಪ, ಕೋಪ, ಬಿರುಕು ಎಲ್ಲವನ್ನು ಚಿತ್ರಿಸುತ್ತಾರೆ.

ಕವಿತೆಯಲ್ಲಿ ಗ್ರಾಮದ ಅಕ್ಕ-ತಮ್ಮನ ಚಿತ್ರಣವನ್ನು ನೀಡುತ್ತಾ, ಉಮಾಪತಿಯ ಸ್ಕಾಲರ್‌ಶಿಪ್ ಕತೆಯಲ್ಲಿ ಹಳ್ಳಿಯಿಂದ ಪಟ್ಟಣಕ್ಕೆ ವಲಸೆ ಬರುವ ಅಕ್ಕ-ತಮ್ಮನ ಚಿತ್ರಣವಿದೆ. ಇನ್ನು ಪಟ್ಟಣದಲ್ಲಿ ಇರುವ ಸ್ಲಮ್‌ನ ಜೀವನದಲ್ಲಿ ದೇವಿರಿ-ಕ್ಯಾತನ ಪಾತ್ರವನ್ನು ಅಕ್ಕ ಕಾದಂಬರಿ ಚಿತ್ರಿಸುತ್ತದೆ.

ಹೀಗೆ ಲಂಕೇಶರ ಕಾವ್ಯ, ಕತೆ, ಕಾದಂಬರಿ ಮೂರು ಸಾಹಿತ್ಯ ಪ್ರಕಾರದಲ್ಲೂ ಅಕ್ಕ-ತಮ್ಮರ ಸಂಬಂಧವನ್ನು ಮೂರು ನೆಲೆಯಲ್ಲಿ ಕಟ್ಟಿಕೊಡುತ್ತಾರೆ. ಅವರ ಒಟ್ಟು ಸಾಹಿತ್ಯದಲ್ಲಿ ಒಂದು ಅವಿನಾಭಾವ ಸಂಬಂಧವಿದೆ. ಅಕ್ಕ-ತಮ್ಮ ಪಾತ್ರದ ಮೂಲಕ ಮನುಷ್ಯ ಹುಟ್ಟಿಬಂದ ಪರಿಸರವಾದ ಗ್ರಾಮ, ಗ್ರಾಮವನ್ನು ಬಿಟ್ಟು ನಗರಕ್ಕೆ ಬರುವ ಸಂದರ್ಭ, ಬಂದನಂತರದ ಪಟ್ಟಣದ ಜೀವನವನ್ನು ಚಿತ್ರಿಸುವಂತಿದೆ. ಮನುಷ್ಯ ಜೀವನದ ಹಂತವನ್ನು ಈ ಮೂರು ಸಾಹಿತ್ಯ ಪ್ರಕಾರಗಳು ತೆರೆದಿಡುತ್ತವೆ. ಈ ಮೂರರಲ್ಲು ಒಂದು ರೀತಿಯ ಬಂಧವಿದೆ.

'ನನ್ನ ಸುತ್ತಾ' ಕವಿತೆ ಪ್ರತಿಭಟನೆಯನ್ನು ಹೇಳುತ್ತದೆ. ಅಸ್ವಸ್ಥಗೊಂಡಿರುವ ಸಮಾಜವನ್ನು ಬೆರಳು ಮಾಡಿ ತೋರಿಸುತ್ತಾ ಅಂತಹ ಸಮಾಜವನ್ನು ತಿರಸ್ಕರಿಸುತ್ತಾ ಇರುವ ಕ್ರಮವಿದೆ.

**"ಈ ದೆವ್ವದ ಈ ದೇವರ ಈ ಶಾಸ್ತ್ರದ ಗೊಡ್ಡು,**
**ಕಾವೇರಿಯ ಬಿಳಿಕೈಯಿನ ನವಿರೇಳುವ ಮದ್ದು,**
**ದಿನ ನಿತ್ಯಾ ನೀ ನೋಡುವ ಅರೆಹೊಟ್ಟೆಯ ಸೆಡ್ಡು**
**(ಈ ಥರ ಹಾರಾಡುವ ಪದ್ಯಾತುರ ಹದ್ದು)"** ೧೨

ಸಂಪ್ರದಾಯದ ತಿರಸ್ಕಾರವನ್ನು ಮಾಡುತ್ತಲೇ, ಇಂತಹ ಗೊಡ್ಡು ಸಂಪ್ರದಾಯದಲ್ಲಿ ಮುಳುಗಿರುವಂತವರು, ಅಕ್ಷರದ ಅಹಂಕಾರದಲ್ಲಿ ಮೆರೆಯುತ್ತಿರುವುದೆಲ್ಲವು ಕ್ಷಣಿಕ ಅದು 'ಈ ನೀರಿನ ಗುಳ್ಳೆ' ಎಂದು ಹೇಳುತ್ತಾರೆ.

ಕವಿತೆಯಲ್ಲಿ "ಈ" ಪುನರಾವರ್ತನೆಯಾಗುತ್ತಲೇ ಯಾಂತ್ರಿಕ ಜಗತ್ತನ್ನು, ನಗರೀಕರಣವನ್ನು, ಅಕ್ಷರ ಕಲಿತ ನಗರದ ಜನರನ್ನು ತಿರಸ್ಕರಿಸುತ್ತಾ ಸಮಾಜದಲ್ಲಿರುವ ಪ್ರತಿಯೊಂದನ್ನು ಪ್ರತಿಭಟಿಸುತ್ತಿದೆ. ಲಂಕೇಶರ ಕತೆಗಳು ಹೆಚ್ಚಾಗಿ ಗ್ರಾಮಜೀವನವನ್ನು ಚಿತ್ರಿಸುವಂತೆ ಕಾವ್ಯಗಳು ಕೂಡ ಗ್ರಾಮಜೀವನವನ್ನು ಚಿತ್ರಿಸುವುದರ ಜೊತೆಜೊತೆಗೆ ನಗರ ಜನರಜೀವನ, ಅರೆಬೆಂದ ಬುದ್ಧಿ, ಅಕ್ಷರದ ಅಹಂಕಾರವನ್ನು ಚಿತ್ರಿಸುತ್ತದೆ.

### ೩.೨ ಸಾಮಾಜಿಕ ಕಾಳಜಿ:-

ರೈತ ಚಳುವಳಿ, ಜಾತಿವಿನಾಶ ಚಳುವಳಿ, ದಲಿತ-ಬಂಡಾಯ ಚಳುವಳಿ, ಗೋಕಾಕ್ ಚಳುವಳಿ, ಮಹಿಳಾವಾದೀ ಚಳುವಳಿ, ಮೀಸಲಾತಿ ಚಳುವಳಿ ಹಾಗೂ ಲೋಹಿಯಾ, ಅಂಬೇಡ್ಕರ್ ಇವರ ವಿಚಾರಧಾರೆಯಿಂದ ಒಂದು ಹೊಸ ಎಚ್ಚರ ಹುಟ್ಟಿಕೊಂಡ ಕಾಲದಲ್ಲಿ ಲಂಕೇಶ್ ಸಾಹಿತ್ಯವನ್ನು ರಚನೆ ಮಾಡುತ್ತಾ ಸಮಾಜದ ಸ್ಥಿತಿಯನ್ನು ತಮ್ಮ ಕಾವ್ಯದ ಮೂಲಕ ಹೊರಹಾಕಿದ್ದಾರೆ.

ನಗರ-ಗ್ರಾಮೀಣಗಳ ನಡುವಿನ ವೈರುದ್ಯವನ್ನು ಇವರ ಕವಿತೆ ಬಿಚ್ಚಿಡುತ್ತಾ ಅಲ್ಲಿ ನಡೆಯುವ ಜಾತಿ,ಧರ್ಮ, ಕೋಮುವಾದಗಳನ್ನು ಪ್ರಶ್ನೆ ಮಾಡುತ್ತವೆ. ಸಾಮಾಜಿಕ ಕಾಳಜಿ ಇರುವಂತಹ ಕವನ ೧೯೮೦ರಿಂದೀಚೆಗೆ ಹೆಚ್ಚಾಗಿ ಲಂಕೇಶರು ರಚನೆ ಮಾಡಿದ್ದಾರೆ. 'ಮಾವಿನ ಮರದಡಿಯ ದೃಶ್ಯ' ಕವಿತೆಯು ಕಥನ ಶೈಲಿಯಲ್ಲಿ ನಿರೂಪಣೆ ಗೊಂಡಿದ್ದು, ಇಂದಿನ ಸಮಾಜದಲ್ಲಿನ ನೈಜ ಸತ್ಯವನ್ನು ತೆರೆದಿಡುತ್ತದೆ. ಶಿವಬಸಯ್ಯ ಹಾಗೂ ಗುಳ್ಯ ಇವರಿಬ್ಬರ ಸ್ನೇಹಿತರ ಕತೆಯನ್ನು ಹೇಳುತ್ತಾ ಜಾತಿಕಲಹದ' ಬಗ್ಗೆ ಹೇಳುತ್ತದೆ.

> "ಮೊನ್ನೆ ತಾನೆ ಬಸವನಗೌಡರ ಕುಮರಿ ನೆಲದಲ್ಲಿ
> ಹೊಲೇರು – ಲಿಂಗವಂತರ ನಡುವೆ ಕಿತ್ತಾಟವಾಗಿ
> ಈ ಕಿತ್ತಾಟ ಯಾಕೆಂದು ಸೈತಗೊತ್ತಿಲ್ಲದ
> ಹೊಲೇರ ದುರುಗನ ಅಳಿಯ ಗುಳ್ಯ ಮತ್ತು
> ಮುಡಿಕೆ ಮನೆಯ ಬಡವ ಶಿವಬಸ್ಯ ಇಬ್ಬರೂ
> ದಿಕ್ಕು ಕಾಣದೆ ನಿಂತದ್ದು – – – – ಹೇಳುವೆ"[೧೩]

ಜಗಳವಾಡಿದ್ದು ಎರಡು ಪಂಗಡಗಳಿಗೆ ಸೇರಿದ ಹೊಲೇರು ಲಿಂಗವಂತರು. ಈ ಪಂಗಡಗಳ ನಡುವಿನ ಜಗಳದಿಂದ ಈ ಜಗಳದ ಬಗ್ಗೆ ಕಿಂಚಿತ್ತು ಗೊತ್ತಿಲ್ಲದ ಅಮಾಯಕ ಸ್ನೇಹಿತರ ಬಗ್ಗೆ ಹೇಳುತ್ತಾ ಇವತ್ತಿನ ಜಾತಿ, ಧರ್ಮ, ಪಂಗಡ, ಕೋಮುಗಳ ನಡುವೆ ನಡೆಯುವ ಜಗಳ ಹಾಗೂ ವೈರತ್ವವನ್ನು ಕವಿತೆ ಬಿಚ್ಚಿಡುತ್ತಾ, ಕೋಮು ಸೌಹಾರ್ದವನ್ನೂ ಹೇಳುತ್ತದೆ. ಯಾರೋ ಹಚ್ಚಿದ ದ್ವೇಷದ ಕಿಡಿಗೆ ಬಲಿಯಾಗುವ ಸಾಮಾನ್ಯ ಜನರ ಮನಸ್ಸಿನ ಚಿತ್ರಣವನ್ನು ಕಾಣಬಹುದು.

ಈ ಕವಿತೆಯಲ್ಲಿ ಬರುವ ಲಿಂಗಾಯತ ಶಿವಬಸಯ್ಯ ಹಾಗೂ ಹೊಲೆಯರ ಅಳಿಯ ಗುಳ್ಯನ ಪಾತ್ರವು ಲಂಕೇಶರ 'ಮುಟ್ಟಿಸಿಕೊಂಡವನು' ಕತೆಯಲ್ಲಿ ಬರುವ ಲಿಂಗಾಯತ ಬಸಲಿಂಗ ಹಾಗೂ ಹೊಲೆಯರ ಡಾ.ತಿಮ್ಮಪ್ಪನ ವ್ಯಕ್ತಿತ್ವದಂತೆ ಮೂಡಿಬಂದಿದೆ. ಕವಿತೆ ಹಾಗೂ ಕತೆ ಎರಡು ಪರಸ್ಪರ ಪ್ರೀತಿ: ಸ್ನೇಹ, ಔದಾರ್ಯದಿಂದ ಮಾಡಬಹುದಾದ ನೋವಿನ ಶಮನದ ಸಾಧ್ಯತೆಯನ್ನು

ಹಾಗೂ ಆರೋಗ್ಯಕರ ಸಮಾಜದ ಸೃಷ್ಟಿ ಸಾಧ್ಯ ಎನ್ನುವ ಸತ್ಯವನ್ನು ಹೇಳುತ್ತದೆ. ಸ್ಪರ್ಶ ಮಾಡುವುದರ ಮೂಲಕ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಬಯಸುವುದು ಸಾಮಾಜಿಕ ಕಾಳಜಿ ಮಾತ್ರವಲ್ಲ ಸಾಂಸ್ಕೃತಿವಾದದ್ದು ಕೂಡ.

'ಗೋಡೆಯ ಜನ' ಕವಿತೆ ಈ ಸಮಾಜದಲ್ಲಿ ಕೊಳೆತು ನಾರುತ್ತಿರುವ ಜಾತಿಪದ್ಧತಿ ಧರ್ಮದ ಬಗ್ಗೆ ಹೇಳುತ್ತದೆ.

"ಈತ ಜನಿವಾರದವನೋ, ಶಿವದಾರದವನೋ, ನಾಮದವನೋ
ಅಥವಾ ಕೇವಲ ಗಡ್ಡ ಬಿಟ್ಟ ಹುಸೇನನೋ
ಎಂದೊಡನೆ ಈತನ ಹಿನ್ನೆಲೆಯಲ್ಲಿ ಗೋಡೆ ಕಾಣುತ್ತದೆ
ಎತ್ತರದ ಗೋಡೆಗಳ ನಡುವೆ ಬೆನ್ನಿಗೆ ಮೊಳೆ ಬಡಿಸಿಕೊಂಡು
ಕತ್ತಲಲ್ಲಿ ನಿಂತು "ನನ್ನ ಗೋಡೆ ಅತ್ಯುತ್ತಮ ಕಣೋ"
ಎಂದು ಕೂಗುವ ಈತನ ನಡಿಗೆ ಕೂಡ ಗೋಡೆಯ ಜೊತೆ;
ಅತ್ಯಂತ ಶ್ರೇಷ್ಠ ಗೋಡೆಯ ತೆವಳುತ್ತ ಈತ ಹೇಳುತ್ತಾನೆ.
"ನನ್ನ ಗೋಡೆಯಿಂದಲೇ ಸೂರ್ಯೋದಯ, ಸೂರ್ಯಾಸ್ತ,
ಪ್ರಾಣಾಯಾಮ, ಜಪಗಳೆಲ್ಲವೂ ಈ ನಾಡಿನಲ್ಲಿವೆ ಕಣಯ್ಯ;
ಈ ಗೋಡೆಯ ಮೇಲಿನ ಗೂಗೆಯ ಕೂಗು ಸಹ
ಗಾಯತ್ರಿ ಜಪವೆಂದು ಪ್ರಖ್ಯಾತವಾಗಿದೆ, ತಿಳೀತಾ?""[೧೪]

ಧರ್ಮದ ಹೆಸರಲ್ಲಿ ತಮ್ಮ ಸುತ್ತಲು ಗೋಡೆಯನ್ನು ನಿರ್ಮಿಸಿಕೊಂಡು ತಮ್ಮ ಕುಲವೇ ಶ್ರೇಷ್ಠ ಎಂದು ಮೆರೆಯುವ ಜನರನ್ನು ಟೀಕಿಸುತ್ತಿದ್ದಾರೆ. ಗೂಬೆಯ ಕೂಗನ್ನು ಗಾಯಿತ್ರಿ ಮಂತ್ರಕ್ಕೆ ಹೋಲಿಸುವಲ್ಲಿ ವ್ಯಂಗ್ಯ ಅಡಗಿದೆ. ಇಲ್ಲಿ ಬರುವ ಹೆಣ್ಣುಮಗಳು ಧರ್ಮವನ್ನು ಮೀರುವುದಕ್ಕೆ ಆ ಗೋಡೆ ಗಂಡನನ್ನು ಪ್ರಚೋದಿಸುತ್ತಾಳೆ. ಆದರೆ ಅದು ಸಾಧ್ಯವಾಗದ ಸ್ಥಿತಿಯನ್ನು ಹೇಳುತ್ತಾ ಇಂದಿಗೂ ವರ್ಗಗಳು, ಜಾತಿಗಳು ಶ್ರೇಷ್ಠ ಎಂದು ಬೀಗುವವರು ಕಡಿಮೆಯಾಗಿಲ್ಲದ ಸ್ಥಿತಿಯನ್ನು ಕವಿತೆ ಹೇಳುತ್ತಾ ಅಂದಿನ – ಇಂದಿನ ಸಾಮಾಜಿಕ ಸ್ಥಿತಿಯನ್ನು ಪರಿಚಯಿಸುತ್ತದೆ. ಕುಲ, ಜಾತಿ, ಧರ್ಮದ ಬದಲಿಗೆ ಗೋಡೆಯನ್ನು ರೂಪಕವಾಗಿ ಬಳಸಿಕೊಂಡಿರುವಲ್ಲಿ ಲಂಕೇಶರ ಸೃಜನಶೀಲತೆ ಕಾಣಬಹುದು.

ಲಂಕೇಶರ 'ಇಟ್ಟಿಗೆ ಪವಿತ್ರವಲ್ಲ; ಜೀವಪವಿತ್ರ' ಹಾಗೂ 'ಬದನವಾಳು ದುರಂತ' ಲೇಖನವು ಕೂಡ ಮತೀಯವಾದ, ಕೋಮುವಾದವನ್ನೇ ಹೇಳುತ್ತಿದೆ. ಸಮಾಜದಲ್ಲಿ ತಲೆನೋವಾಗಿ ಪರಿಣಮಿಸಿರುವ ಕೋಮುಗಲಭೆಯನ್ನು ಹತ್ತಿಕ್ಕುವ ಪ್ರಯತ್ನವಿದೆ.

ಇನ್ನೂ ಶ್ರಮಿಕ ಜೀವಿಗಳು ತಮ್ಮ ಶ್ರಮದಲ್ಲೂ ಸಂತೋಷದಿಂದಿರುವ ಚಿತ್ರಣವನ್ನು 'ಕಟ್ಟಿಗೆ ಹೊರೆ ಹೊರುವ ಹೆಣ್ಣುಮಕ್ಕಳ ಮೂಲಕ ಕಟ್ಟಿಗೆ ಹೊರೆ ಕೆಳಗೆ ನಗುವ ಮುಖಗಳು' ಕವಿತೆ ಹೇಳಿದರೆ, 'ಕಾಡು ಮೇಡಿನ ಜನರ ಹಾಡು' ಕವಿತೆ ಹಸಿರು ತುಂಬಿದ ಬಾಳೆಹೊನ್ನೂರಿನ ಕಾಡನ್ನು ಬೆಂಗಳೂರಿನ ನಗರೀಕರಣವನ್ನು ಮುಖಾಮುಖಿಗೊಳಪಡಿಸುತ್ತಾ ಇಂದು ನಗರ ಬೆಳೆದಷ್ಟು ಕಾಡುನಾಶವಾಗುವ ಸ್ಥಿತಿಯನ್ನು ಹೇಳುತ್ತಿದೆ. ಲಂಕೇಶ್ ೧೯೮೧ರಲ್ಲೇ ಬೆಂಗಳೂರಿನ ಪರಿಸರದ ಬಗ್ಗೆ ಹೇಳುತ್ತಿದ್ದು ಬಹುಶಃ ಅವರು ಇಂದಿನ ಬೆಂಗಳೂರನ್ನು ಕಂಡಿದ್ದರೆ ಅವರ ಕಾವ್ಯದ ಮೊನಚು ಇನ್ನೂ ಹರಿತವಾಗಿರುತ್ತಿತ್ತೇನೋ.

ಇಂಥ ನಗರಗಳಲ್ಲಿ ವಾಸಿಸುವ ಮನುಷ್ಯ ಸಮಾಜ ಹೇರಿರುವ ನೈತಿಕತೆಯ ಚೌಕಟ್ಟಿನೊಳಗೆ ಸಿಲುಕಿಕೊಂಡು ತಂತಾನೆ ಕೆಲವು ನಿಯಮಗಳನ್ನು ಮಾಡಿಕೊಂಡು ತನ್ನ ಮೂಲಭೂತ ಪ್ರವೃತ್ತಿಗಳನ್ನು ಸಂಸ್ಕರಿಸಿಕೊಂಡು ತಾನು ಸುಸಂಸ್ಕೃತ ಎಂದು ಮೆರೆಯುತ್ತಿರುತ್ತಾನೆ. ಇಂತವರು ಸ್ಥಾನ, ಮಾನ, ಅಧಿಕಾರಿಗಳಿಗೆ ಆಸೆಪಟ್ಟು ಇತರ ಜೀವಿಗಳನ್ನು ತುಳಿದು ತಮ್ಮ ಉದ್ಧಾರವನ್ನು ಬಯಸುತ್ತಾರೆ. ಇಂತಹ ನೈತಿಕ ಚೌಕಟ್ಟನ್ನು ಮೀರಬೇಕು. ಮನುಷ್ಯ ತನ್ನ ಮಾನ ಉಳಿಸಿಕೊಳ್ಳುವುದಕ್ಕೆ ನಿಸರ್ಗದ ಜೀವಿಗಳನ್ನು ಬಲಿಕೊಟ್ಟು ತಾನು ಜೀವಿಸುತ್ತಿರುವ ಸ್ಥಿತಿಯನ್ನು, ಅವುಗಳಿಲ್ಲದೆ ಆತ ಜೀವಿಸುವುದಕ್ಕೆ ಸಾಧ್ಯವೇ ಇಲ್ಲದ ಪರಾವಲಂಬಿ ಸ್ಥಿತಿಯನ್ನು 'ಅವಮಾನವೇ ಇಲ್ಲದ ಜೀವಿಗಳು' ಕವಿತೆ ಚಿತ್ರಿಸುತ್ತದೆ.

ಕ್ರಾಂತಿಯ ಭ್ರಾಂತಿಯಲ್ಲಿರುವವರನ್ನು ಎಚ್ಚರಿಸುವ ಪ್ರಯತ್ನವನ್ನು ಲಂಕೇಶ್ 'ನಮ್ಮ ಕಾಮ್ರೇಡರು', 'ಸೋಷಲಿಸ್ಟ್‌ಸುಖ', ಕವನದಲ್ಲಿ ಮಾಡಿದ್ದಾರೆ. ನಮ್ಮ ಕಾಮ್ರೇಡರು ಕವಿತೆಯಲ್ಲಿ ಕಮ್ಯುನಿಸಂನ ಟೀಕೆ ಎದ್ದು ಕಂಡರೆ ಸೋಷಲಿಸ್ಟ್ ಸುಖ ಕವಿತೆ,

"ಲೋಹಿಯ ಶಿಷ್ಯ
ಬೋರ‍್ಡು ಕನ್ನಡ ಮಾಡಿ" ಎಂದೆನುವ ವಿಷ್ಯ
ಕೇಳಿ ನಾಯಕ "ಬೋರ್ಡ್!" ಎನ್ನುತ್ತ ಎದ್ದ
ಮತ್ತೆಲ್ಲ ಕೇಳಿದರು ಸೋಷಲಿಸ್ಟ್ ಸದ್ದ"[೧೫]

ಲೋಹಿಯ ಚಿಂತಕರು ಎಂದು ಸುಳ್ಳು ಹೇಳಿಕೊಂಡು ತಿರುಗುವ ಪುಢಾರಿಗಳನ್ನು ಟೀಕಿಸುತ್ತಾರೆ. ಈ ರೀತಿಯ ಸೈದ್ಧಾಂತಿಕ ನಿಲುವೆ ಇಲ್ಲದೆ ನಾವು ಹೋರಾಟವಾದಿಗಳು ಎಂದು ತಿರುಗಾಡುವ ಪುಢಾರಿ ರಾಜಕಾರಣಿಗಳನ್ನು ನೀಲುಕವಿತೆಯಲ್ಲೂ ಚಿತ್ರಿಸಿದ್ದಾರೆ.

"ತಮ್ಮ ರಾಜಕೀಯ ಸಿದ್ಧಾಂತವೇನು?" ಎಂದು
ಮಂಡ್ಯದ ನಾಯಕರನ್ನು ಕೇಳಿದರೆ ತಬ್ಬಿಬ್ಬಾಗಿ
"ಸಿದ್ಧಾಂತವಾ?

ನಾನು ಯಾವುದಕ್ಕೂ ಸಿದ್ಧ" ಎಂದು ಟವಲು ಕೊಡವಿ

ರೆಡಿಯಾದರು"[೧೬]

ಚಳುವಳಿಗಳೆಲ್ಲವೂ ಸಾಮಾಜಿಕ ಬದಲಾವಣೆಗೋಸ್ಕರ ಜನಸಾಮಾನ್ಯರಲ್ಲಿ ಎಚ್ಚರ ಮತ್ತು ಜಾಗೃತಿಯನ್ನು ಮೂಡಿಸುವಂತದ್ದು. ಇಂತಹ ಚಳುವಳಿಗಳು ಸೈದ್ಧಾಂತಿಕ ನೆಲೆಗಟ್ಟಿನಲ್ಲಿ ಸಂಘಟನೆಯನ್ನು ಮಾಡುತ್ತದೆ. ಆದರೆ ಇಂತಹ ಚಳುವಳಿಯ ನಾಯಕರಿಗೆ ಒಂದು ನಿರ್ದಿಷ್ಟ ಸೈದ್ಧಾಂತಿಕತೆಯೇ ಇಲ್ಲವೆಂದಾಗ ಅಂತಹ ಚಳುವಳಿಗಳು ಅರಾಜಕತೆಯಿಂದ ಕೂಡಿರುತ್ತದೆ. ಸೈದ್ಧಾಂತಿಕ ನೆಲೆಗಟ್ಟು ಇಲ್ಲದ ಅರಾಜಕಸ್ಥಿತಿಯ ನಾಯಕರನ್ನು ಕವಿತೆ ವ್ಯಂಗ್ಯ ಮಾಡುತ್ತಿದೆ.

ಈ ಎಲ್ಲಾ ಕವಿತೆಗಳೂ ನವ್ಯದಿಂದ ನವ್ಯೋತ್ತರದ ಕಡೆಗೆ ಹೊರಳುತ್ತಿರುವ ಸ್ಥಿತಿಯನ್ನು ವ್ಯಕ್ತಿ–ಸಮಾಜಗಳ ನಡುವಿನ ಬದುಕನ್ನು ಹೇಳುತ್ತಾ ಸಮಾಜಾಭಿಮುಖವಾಗಿ ಚಲಿಸುತ್ತದೆ. ಈ ಅಂಶವನ್ನು ಲಂಕೇಶರ ಒಟ್ಟು ಸಾಹಿತ್ಯದಲ್ಲೇ ಗುರುತಿಸಬಹುದು.

ವಿಜಯದಬ್ಬೆಯವರು ಒಂದು ಕಡೆ ಲಂಕೇಶರ ಸಾಹಿತ್ಯ ಬೆಳವಣಿಗೆಯನ್ನು ಕುರಿತು ಹೀಗೆ ಹೇಳುತ್ತಾರೆ. ಚಲನಶೀಲವಾದ ಕಾಲದಲ್ಲಿ ವೈಯಕ್ತಿಕತೆ, ಸಾಮಾಜಿಕತೆ ಮತ್ತು ಸಾಂಸ್ಕೃತಿಕತೆಗಳು ಸ್ಥಿತ್ಯಂತಗೊಳ್ಳುವುದು ಅನಿವಾರ್ಯ, ಸ್ಥಿತಿಸ್ಥಾಪಕತ್ವ ಅಥವಾ ಹಿಗ್ಗಬಲ್ಲ ಗುಣವಿರುವ ಮನಸ್ಸು ಮಾತ್ರ ಸ್ಥಿತ್ಯಂತರದೊಂದಿಗೆ ಬೆಳೆಯುತ್ತದೆ. ಇಲ್ಲದಿದ್ದರೆ ಅದಕ್ಕೆ ಸ್ಪಂದಿಸಲಾಗದ ಅಥವಾ ಜಡತ್ವದಿಂದ ಸ್ಥಿತ್ಯಂತರವನ್ನೇ ವಿರೋಧಿಸುತ್ತಾ ಕುರುಡಾಗಿ ಉಳಿಯುತ್ತದೆ. ಲಂಕೇಶರ ಸೃಜನಶೀಲತೆಯಲ್ಲಿ ಸ್ಥಿತ್ಯಂತರಕ್ಕೆ ತೆರೆದುಕೊಂಡ ಸ್ಥಿತಿಸ್ಥಾಪಕತೆ ದಟ್ಟವಾಗಿರುವುದರಿಂದಲೇ ಅವರಿಗೆ ಬೆಳವಣಿಗೆ ಸಾಧ್ಯವಾಗುತ್ತದೆ ಎನ್ನುತ್ತಾರೆ. ಲಂಕೇಶರು ಈ ಸಂದರ್ಭದಲ್ಲಿ ನವ್ಯತೆಯಿಂದ ನವ್ಯೋತ್ತರ ಕಡೆಗೆ ಹೊರಳುವುದನ್ನು ಕಾಣಬಹುದು. ಪ್ರಾರಂಭದ ಲಂಕೇಶರ ಕಾವ್ಯಗಳಲ್ಲಿ ಸಾಮಾಜಿಕ ಕಾಳಜಿ ಬೂದಿಮುಚ್ಚಿದ ಕೆಂಡದಂತೆ ಗೌಪ್ಯವಾಗಿ 'ನಮ್ಮ ಕಡೆಯ ಜನ,' 'ವರ್ಗಗಳು' ಕವಿತೆಯಲ್ಲಿ ಕಂಡುಬರುತ್ತವೆ. ಆನಂತರ ರಚನೆ ಮಾಡಿದ 'ಗೋಡೆಯ ಜನ', 'ಮಾವಿನಮರದಡಿಯ ದೃಶ್ಯ ಕವಿತೆಯಲ್ಲಿ ಸ್ಫೋಟಗೊಳ್ಳುವುದನ್ನು ಹೀಗೆ ಗುರುತಿಸಬಹುದು.

೩.೩ ಸ್ತ್ರೀಪಾತ್ರಚಿತ್ರಣ :-

ಲಂಕೇಶರ ಒಟ್ಟು ಕಾವ್ಯದ ಮೇಲೆ ಒಮ್ಮೆ ಕಣ್ಣಾಯಿಸಿದರೆ ಅವರಿಗೆ ಹೆಣ್ಣು ಅವ್ವ, ಅಕ್ಕ ಕಾಮದಗೊಂಬೆಯಾಗಿ ಕಾಣುತ್ತಾಳೆ. ಅವರ ಅವ್ವ ಕವಿತೆಯ ತಾಯಿ ಹೆಣ್ಣಿನ ಪ್ರಧಾನಿಕರವನ್ನು ಹೇಳುತ್ತದೆ. ಆಕೆ ತನ್ನ ಕುಟುಂಬಕ್ಕಾಗಿ ದುಡಿಯುವವಳು, ಅಷ್ಟೇ ಅಲ್ಲ ಶ್ರಮಿಕ ಮಹಿಳೆ ಆಕೆ. ಶ್ರಮಜೀವಿಗಳ ಸಂಕೇತವಾಗಿ ಬಳಸಿದ್ದಾರೆ. ಫಲವತ್ತಾದ ಕಪ್ಪು ನೆಲದಂತಿದ್ದ ಆಕೆ ನೊಂದಷ್ಟು ಹೂ ಹಣ್ಣು ಬಿಟ್ಟವಳು. ಬನದ ಕರಡಿಯ ಹಾಗೆ ಚಿಕ್ಕಮಕ್ಕಳ ಸಾಕಿದವಳು. ಅವಳು ಬದುಕಿದ್ದು "ಕಾಳುಕಡ್ಡಿಗೆ, ದುಡಿತಕ್ಕೆ, ಮಕ್ಕಳಿಗೆ, ಮೇಲೊಂದು ಸೂರು, ಅನ್ನ, ರೊಟ್ಟಿ ಹಚ್ಚಡಕ್ಕೆ; ಸರೀಕರ ಎದುರು ತಲೆಯೆತ್ತಿ ನಡೆಯಲಿಕ್ಕೆ" ಆಕೆಗೆ ಬದುಕಿಗಿಂತ ದೊಡ್ಡ ಭಗವದ್ಗೀತೆ ಮತ್ತೊಂದಿಲ್ಲ. ಹೀಗೆ ತಾಯಿಯನ್ನು ಪ್ರೀತಿ, ತ್ಯಾಗ, ಸತ್ಯಗಳ ಮೂಲಕ ವರ್ಣಿಸಲಾಗಿದೆ. ಕೃಷಿಕ, ಗ್ರಾಮೀಣ, ಅವೈದಿಕ ಪರಿಸರದಲ್ಲಿ ಮೂಡಿಬಂದಿರುವ ಪಾತ್ರ ಅವ್ವನದು. ಮಾತೃಪ್ರಧಾನ ಕುಟುಂಬವನ್ನು ಕವಿ ಒಪ್ಪುತ್ತಾರೆ. ಬಹುಶಃ ಪಿತೃಪ್ರಧಾನ ಸ್ಥಿತಿಯಲ್ಲಿರುವ ದರ್ಪ, ಹಿಡಿತ ಇದಕ್ಕೆ ಕಾರಣವಿರಬಹುದು.

ಅವ್ವನನ್ನು ಹೀಗೆ ತ್ಯಾಗಕ್ಕೆ, ತನ್ನ ಕುಟುಂಬಕ್ಕಾಗಿ ದುಡಿದವಳು ಎಂದು ಚಿತ್ರಿಸಿದರು. ಅಂತಹ ತ್ಯಾಗದಿಂದಲೇ ಹೆಣ್ಣು ದೊಡ್ಡವಳಾಗಬೇಕೆಂದು ನಿರೀಕ್ಷಿಸುವುದಿಲ್ಲ. ಹೆಣ್ಣಿನಲ್ಲಿರುವ ಲೈಂಗಿಕತೆಯನ್ನು ಒಪ್ಪುತ್ತಲೂ ಆಕೆಯನ್ನು ಉನ್ನತಸ್ಥಾನದಲ್ಲಿ ನಿಲ್ಲಿಸುತ್ತಾರೆ. 'ಜೀವಲಿ', 'ಪ್ರತಿಭಟನೆಯ ಒಂದು ಮುಖ', 'ವರ್ಗಗಳು', ಕವಿತೆಗಳನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ.

**"ಲಲಿತ, ಪ್ರಿಯಂವದೆ**
**ಈರನಿಗೆ ಕಾಸುಕೊಟ್ಟು ಮೆಚ್ಚಿ**
**ದಿನವಿಡೀ ಕುಣಿಸಿದರು**
**ಕರಿಸಿದ್ದ ಹುಡುಗಿಯರ ನೋಡುತ್ತಿದ್ದ**
**ಹುಡುಗಿಯರು ಈರನ್ನ, ಅಜ್ಜ**
**ಕೋಪಗೊಂಡಿದ್ದ. ನಾನು ಲಲಿತಳ ಕಡೆಗೆ;**
**ಕರಿಬಸವಿ ಸುಮ್ಮನೆ ಕೂತು**
**ಕರಿಸಿದ್ದನ್ನ ಕಣ್ಣಲ್ಲಿ ಹೀರುತ್ತಿದ್ದಳು"[೧೭]**

ಈ ವರ್ಗಗಳು ಕವಿತೆಯಲ್ಲಿ ಕರಿಬಸವಿ-ಲಲಿತ-ಕರಿಸಿದ್ಧ, ಪ್ರಿಯಂವದೆ-ಈರ ಇವರ ಮನಸ್ಸುಗಳಲ್ಲಿ ನಡೆಯುವ ತಲ್ಲಣವನ್ನು, ಆಕರ್ಷಣೆಯನ್ನು ಚಿತ್ರಿಸುವುದರ ಜೊತೆಗೆ ದೇಹ ಮತ್ತು ಮನಸ್ಸಿನ ದ್ವಂದ್ವವನ್ನು ಹೇಳಹೊರಡುತ್ತಾರೆ.

ಕವಿ ಹೆಣ್ಣೊಬ್ಬಳಿಂದ ದೊರಕುವ ಪ್ರೀತಿಯಿಂದ ವಂಚಿತರಾಗಿದ್ದಕ್ಕೆ ಹಲುಬಿದ್ದಾರೆ. ಜೀವಲಿ ಕವಿತೆಯಲ್ಲಿ ಅದನ್ನು ಹೀಗೆ ವರ್ಣಿಸುತ್ತದೆ.

"ಮುಂಚೆಮನೆಯ ಕೆಂಚ ಇವಳ ಕೈ ಮುಟ್ಟಿದ
ಇವಳ ಎಮ್ಮೆಯಂಥ ಬೆನ್ನ ಸವರಿ ತಟ್ಟಿದ;
ರೊಚ್ಚಿದೊಡನೆ ಇಟ್ಟುಬಿಟ್ಟ ಬೆಳ್ಳಿ ಪಾವಲಿ
ನಕ್ಕು ತೆಪ್ಪಗಾಗಬೇಕೆ ಹೇಳಿ ಹಾಳು ಜೀವಲಿ"[೧೮]

ಇಲ್ಲಿ ಹೆಣ್ಣನ್ನು ಶುದ್ಧ ಕಾಮದ ಗೊಂಬೆಯಂತೆ ಕಂಡಿದ್ದಾರೆ. ಆಕೆ ಸಿಗದಿದ್ದಕ್ಕೆ ಹಲುಬಿದ್ದಾರೆ. ತನ್ನ ಸ್ನೇಹಿತ ಕೆಂಚನ ಅದೃಷ್ಟವನ್ನು ಕಂಡು ಅಸೂಯೆ ಪಡುವ ರೀತಿಯಲ್ಲಿ ಕವಿತೆ ಚಿತ್ರಿತವಾಗಿದೆ.
ಸದಾ ಕಾಡುವ ಸರೋಜಳಾಗಿ ಹೆಣ್ಣನ್ನು 'ಕಾಡಬೇಡ ಸರೋಜ' ಕವಿತೆಯಲ್ಲಿ ಹೀಗೆ ಚಿತ್ರಿಸಿದ್ದಾರೆ.

"ಕಾಡಬೇಡ, ಸರೋಜ, ಹೋದ ಹೋದಲ್ಲಿ ಇಷ್ಟಗಲ ಕಣ್ಣ ಸೂಜಿಗಲ್ಲ
ನೆತ್ತರಿಗೆ ಹುಚ್ಚು ಹಿಡಿಸುವ ತುಟಿಯ, ಹಲ್ಲ
ಹತ್ತಿರ ಬಂದು ಒಂದು ಸಲ, ದೂರಕ್ಕೆ ಸರಿದು ಇನ್ನೊಮ್ಮೆ
ಕಿತ್ತು ತಿನ್ನಬೇಡ"[೧೯]

ಹೀಗೆ ಅವಳ ಸೌಂದರ್ಯವನ್ನು ಅಂಗಾಂಗಗಳ ಚಿತ್ರಣವನ್ನು ಕೊಡುತ್ತಾನೆ. 'ಬರೆಯ ಕೂಡದು ಅಂತ ಮೊಂಡು ಕೂತೆ ಸರೋಜ' ಕವನದಲ್ಲಿ ಹೆಣ್ಣಿನ ಚಿತ್ರಣವಿದ್ದು. ಹೆಣ್ಣಿನ ನೆನಮು ಸದಾ ಕಾಡುವುದನ್ನು ಕವಿಯ ಅನುಭವದ ನಿವೇದನೆಯಂತೆ ಚಿತ್ರಿತವಾಗಿದೆ. ಹೀಗೆ ಹೆಣ್ಣು 'ತಾಯಿ, ಸೋದರಿ, ಸಖಿ, ಶುದ್ಧ ಕಾಮದ ಗೊಂಬೆಯಂತೆ ಆಕೆ ಲಂಕೇಶರಿಗೆ ಅನುಭವಕ್ಕೆ ಬಂದಿದ್ದಾಳೆ.

"ಪ್ರೇಮಿಸುವುದು ಕೋಮಲ ಬೆರಳುಗಳಿಂದ ಸೂರ್ಯನ
ಬೆಳಕಿನ ಗೆರೆಯ ನೇವರಿಸಿದ ಹಾಗೆ,
ಕಳೆದ ಎಲ್ಲ ದಿನಗಳೊಂದಿಗೆ ಒಪ್ಪಂದ ಮಾಡಿಕೊಂಡು
ಕೈಕುಲಕಿ ನಕ್ಕಹಾಗೆ,
ಬರಲಿರುವ ಕಾಲದ ಹೆಗಲಿಗೆ ಕೈಹಾಕಿ
ಥೈಯ ಥೈಯ ಎಂದು ನಡೆದ ಹಾಗೆ
ಪ್ರೇಮಿಸುವುದು ಸಿದ್ಧಾರ್ಥ ಹುಡುಕಿ ಹೊರಟಹಾಗೆ
ಅವ್ವನ ಮೊಲೆ ನಡುವೆ ಮುಖವಿಟ್ಟು ನಲಿದ ಹಾಗೆ"[೨೦]

ಪ್ರೀತಿ ಎನ್ನುವಂತದ್ದು ಮನುಷ್ಯನಿಗೆ ಬದಲಾದ ಸ್ವರೂಪದಲ್ಲಿ ಒಂದಲ್ಲ ಒಂದು ಹಂತದಲ್ಲಿ ದೊರೆಯುತ್ತಲೇ ಇರುತ್ತದೆ. ಅದು ತಾಯಿ, ಹೆಂಡತಿ, ಹೀಗೆ ಹೆಣ್ಣು ಪ್ರೀತಿಯನ್ನು ಧಾರೆ

ಎರೆಯುತ್ತಿದ್ದಾಳೆ. ಇಲ್ಲಿ ಸಖಿ, ಅವ್ವ ಬುದ್ಧಳಾಗಿದ್ದಾಳೆ. ಮನುಷ್ಯ ಜೀವನದಲ್ಲಿ ಕಾಮ-ಪ್ರೇಮದ ಕಣ್ಣಾಮುಚ್ಚಾಲೆ ಹೇಗೆ ಎಂಥಂಥ ಸಂಬಂಧಗಳ ಆಕಾರ-ವಿಕಾರಗಳನ್ನು ನಿರ್ಮಿಸುತ್ತದೆ ಎಂಬ ಸತ್ಯವನ್ನು ಸಾರಿದ್ದಾರೆ. ಬಿಚ್ಚು, ಕಾಡಬೇಡ ಸರೋಜ, ಸಖಿ, ಇಲ್ಲೆಲ್ಲವೂ ಹೆಣ್ಣಿನ ಕಾಮ, ಗಂಡು ಅವಳಲ್ಲಿ ಹುಡುಕುವ ಭೋಗಲಾಲಸೆಯ ಅವಕಾಶಗಳು ಇವನ್ನೆಲ್ಲವನ್ನು ಚಿತ್ರಿಸಿದ್ದಾರೆ. ಹೀಗೆ ಗಂಡು ಹೆಣ್ಣಿನ ಸಂಬಂಧದ ದ್ವಂದ್ವವನ್ನು, ಸಂಕೀರ್ಣಸ್ವರೂಪವನ್ನು, ಲಂಕೇಶರು ತಮ್ಮ ಕವಿತೆಗಳಲ್ಲಿ ಸಾಕಷ್ಟು ವೈವಿಧ್ಯಮಯವಾಗಿ ಮಂಡಿಸಿದ್ದಾರೆ. ಹೆಣ್ಣಿನ ಅಂಗಾಂಗ ವರ್ಣನೆಯ ಇಂದ್ರಿಯ ಗ್ರಾಹ್ಯತೆಯ ಮಟ್ಟದಲ್ಲಿಯೂ, ಮುಕ್ತವಾಗಿರುವ ಅವರ ಕವಿತೆಗಳು ನಿಸರ್ಗದಂತೆ ಸಮೃದ್ಧವಾಗಿರುವ ಆಕೆಯ ಫಲವತ್ತಿಗೂ ಬೆರಗಾಗುತ್ತವೆ.

ಲಂಕೇಶರ ಒಟ್ಟುಸಾಹಿತ್ಯದಲ್ಲಿ ಮಹಿಳಾ ಪಾತ್ರ ಚಿತ್ರಣ ನಿರಂತರವಾದ ವಿಕಸನಶೀಲ ಗುಣವನ್ನು ಹೊಂದಿದೆ. ಪ್ರಾರಂಭದ ಬರವಣಿಗೆಯಲ್ಲಿ ಆಕೆಯ ಬಾಹ್ಯ ಸೌಂದರ್ಯದಿಂದ ಆಕರ್ಷಣೆಗೆ ಒಳಗಾಗಿ ಅವುಗಳ ಚಿತ್ರಣವನ್ನು ಕಾಣಬಹುದು. ಆನಂತರ ಬಂದ ಸಾಹಿತ್ಯದಲ್ಲಿ ಹೆಣ್ಣನ್ನು ವಿಶಿಷ್ಟ ರೀತಿಯಲ್ಲಿ ಚಿತ್ರಿಸಲಾಯಿತು. ಅವರ ಅವ್ವ ಕವಿತೆ, ಅಕ್ಕ ಕಾದಂಬರಿಯಲ್ಲಿ ಬರುವ ಅಕ್ಕನ ಪಾತ್ರ ಇದಕ್ಕೆ ನಿದರ್ಶನವಾಗಿದೆ. ಇನ್ನು ನೀಲು ಕವಿತೆಯ ನಿರೂಪಣೆ ಗಮನಿಸಿದರೆ ಪ್ರತಿಸಾಲನ್ನು ಹೆಣ್ಣಿನ ಮೂಲಕವೇ ಹೇಳಲಾಗಿದೆ. ಇಲ್ಲೆಲ್ಲ ಹೆಣ್ಣು ಅವಳ ಮೇಲೆ ಹೇರಲಾಗಿದ್ದ ಸಿದ್ಧಮಾದರಿಯ ಚೌಕಟ್ಟನ್ನು ಮೀರಿ ನಿಲ್ಲುವ ಚಿತ್ರಣವಿದೆ.

"ಇದಕ್ಕೆ ಕಾರಣಗಳಿಲ್ಲದಿಲ್ಲ. ಒಂದು, ಬದಲಾದ ಸಾಂಸ್ಕೃತಿಕ ಸಂದರ್ಭಗಳಲ್ಲಿ ಸ್ತ್ರೀವಾದದ ಜರೂರು; ಎರಡ, ಭಾರತೀಯ ಸಮಾಜದಲ್ಲಿ ಕಾಣಿಸಿಕೊಂಡ ವಿದ್ಯಾವಂತ ಹಾಗೂ ಉದ್ಯೋಗಸ್ಥ ಮಹಿಳೆಯರ ಆಂತರಿಕ ತಲ್ಲಣಗಳು; ಮೂರು, ನವ್ಯತೆಯು ಮಾಗಿ ಪಕ್ವಗೊಂಡು ನವ್ಯೋತ್ತರದತ್ತ ಅಂದರೆ; ಬಂಡಾಯ-ದಲಿತ ಹಾಗೂ ಸ್ತ್ರೀವಾದಿ ಚಳುವಳಿಗಳ ದಿಕ್ಕಿನತ್ತ ಕನ್ನಡ ಸಾಹಿತ್ಯ ಹೊರಳಿದ್ದು; ನಾಲ್ಕು, ತಮ್ಮ ಬರವಣಿಗೆಗೊಂದು ಹೊಸ ದೃಷ್ಟಿ ಮತ್ತು ಹೊಸ ಆಯಾಮವನ್ನು ತಂದುಕೊಳ್ಳಬೇಕೆಂಬ ಲಂಕೇಶರ ತಹತಹ"[20] ಇವೆಲ್ಲವು ಲಂಕೇಶರು ಸ್ತ್ರೀಯನ್ನು ತಮ್ಮ ಸಾಹಿತ್ಯದಲ್ಲಿ ನೋಡುವ ದೃಷ್ಟಿಕೋನವನ್ನೇ ಬದಲಾಯಿಸಿತು.

**೩.೪ ಕಾವ್ಯದ ನಾಯಕನ ಚಹರೆಗಳು :-**

ನಾಯಕ ಎಂದ ಕೂಡಲೇ ಆತ ಪುರಾಣ ಪುರುಷನೋ ಅಥವಾ ಉನ್ನತ ವಂಶದವನೋ ಆಗಿದ್ದು ತನ್ನ ಕಾಲದ ಆದರ್ಶಗಳ, ಉನ್ನತ ಮೌಲ್ಯಗಳ ಪ್ರತಿನಿಧಿಯಾಗಿರುತ್ತಾನೆ ಎಂಬ ಕಲ್ಪನೆ ನಮ್ಮ ಮನಸ್ಸಿಗೆ ಹತ್ತುತ್ತದೆ. ಆದರೆ ಆಧುನಿಕ ಕಾವ್ಯ ವ್ಯಕ್ತಿನಿಷ್ಠವಾದದ್ದು. ಇಲ್ಲಿ ಕಾಣುವ ಒಂದು ಪಾತ್ರವಾಗಲಿ, ಕವಿಯಾಗಲಿ, ನಿರೂಪಕನಾಗಲಿ ಒಂದು ಸಣ್ಣ ಸನ್ನಿವೇಶದ ಮೂಲಕ ಅಥವಾ ಘಟನೆಯ ಮೂಲಕ ಅಥವಾ ಅನುಭವದ ಮೂಲಕ ನಮ್ಮ ಕಣ್ಣು ಮುಂದೆ ಪ್ರತ್ಯಕ್ಷವಾಗುವವರೇ ಹೊರತು ಅವರ ಇಡೀ ವ್ಯಕ್ತಿತ್ವದ ಚಿತ್ರಣ ಯಾವುದೇ ಆಧುನಿಕ ಕವಿತೆಯಲ್ಲಿ ಸಂಪೂರ್ಣವಾಗಿ ಅಭಿವ್ಯಕ್ತವಾಗುವುದಿಲ್ಲ. ಆಧುನಿಕ ನಾಯಕ ಒಂದು ವ್ಯಕ್ತಿಚಿತ್ರವಾಗಿ ಮಾತ್ರ ನಮ್ಮ ಕಣ್ಣೆದುರು ನಿಲ್ಲುತ್ತಾನೆ.

ಲಂಕೇಶರ ಕಾವ್ಯ ನಾಯಕ ಅರ್ಥಪೂರ್ಣ ಬದುಕನ್ನು ಹುಡುಕಾಡುವ ಆಧುನಿಕನೊಬ್ಬನ ಸಂವೇದನಾಶೀಲ ಮನಸ್ಸಾಗಿರುತ್ತದೆ. ನಗರ ಕೇಂದ್ರಿತವಾದ ವ್ಯಕ್ತಿ ಎದುರಿಸಬೇಕಾದ ಯಾಂತ್ರೀಕರಣ ತಂದ, ವ್ಯಕ್ತಿ ಸಂಬಂಧಗಳ ನಡುವಣ ವಿಚ್ಛಿದ್ರತೆ, ಬಿರುಕು, ಈ ಯಾಂತ್ರೀಕೃತ ಜಗತ್ತು ಅವನ ಮೇಲೆ ಬಲವಂತವಾಗಿ ಹೇರುವ ನಿಯಮಗಳನ್ನು ತಿರಸ್ಕರಿಸುವ ಮನಸ್ಸಿನ ನಾಯಕನ ಚಿತ್ರಣವಿದೆ. ಯಾಂತ್ರಿಕರಣಗೊಂಡ ನಗರಗಳ ಕ್ರೌರ್ಯ, ಅಕ್ಷರ ಕಲಿತ ಜನರ ಅಹಂಕಾರದಿಂದ ಬೇಸತ್ತ ನಾಯಕ ತನ್ನ ಬೇರುಗಳನ್ನು ಹುಡುಕುವ ಸ್ಥಿತಿ, ಅನಾಥ ಪ್ರಜ್ಞೆಯನ್ನು ಕಾಡುವ ನಾಯಕನ ಸ್ಥಿತಿ ಕಂಡುಬರುತ್ತದೆ.

ಸಂಸ್ಕೃತಿಯನ್ನು, ಪರಂಪರೆಯನ್ನು ತನ್ನ ವ್ಯಕ್ತಿತ್ವದ ನೆಲೆಯಿಂದ ಶೋಧಿಸುವ, ವಿಮರ್ಶಿಸುವ ಹಾಗೂ ಬೆಲೆಕಟ್ಟುವ ಮನೋಧರ್ಮದ ನಾಯಕನ ಚಿತ್ರಣ ಕಾಣಬಹುದು. ತಲೆಮಾರು ಕವಿತೆಯ ನಾಯಕ ತನ್ನ ಸ್ಥಿತಿಯನ್ನು ಅರಿಯುವುದರ ಮೂಲಕ ಸ್ವವಿಮರ್ಶೆಗೆ ಒಳಪಡುತ್ತಾನೆ.

**"ಈಗ ಬರೆಯುವ ಕೋಣೆಯಲ್ಲಿ ನಿಂತು**
**ಯೋಚಿಸಿದೊಡನೆ ತಲೆಮಾರುಗಳ ನೆನಪು;**
**ಅಜ್ಜ, ಅಪ್ಪ, ಗಾಂಧಿ ಮುಖಂಡ**
**ನಮ್ಮ ಚಿಕ್ಕ ಗದ್ದೆ**
**ಅದರಲ್ಲಿ ಮಣ್ಣಾಗಿರುವ ಅವ್ವ**
**ಸಂತೆ ಮತ್ತು ಬೇಲಿ ಮತ್ತು ನಗೆ**
**ಪುಢಾರಿ ಅಣ್ಣ**
**ಅರವತ್ತರ ಅಪ್ಪ**
**ಸೇವೆ ಸಲ್ಲಿಸಲು ಬಂದು ಆಕಳಿಸುವ**

**ಗ್ರಾಮ ಸೇವಕ**

**ಬರದ ಮಳೆ**

**ಬೆಳೆಯದ ಬೆಳೆ**

**ಎಲ್ಲೋ ಮೂಲೆಯಲ್ಲಿ ಮೂಡುತ್ತಿದೆ ಕ್ರಾಂತಿ**

**ಎಂಬ ಭ್ರಾಂತಿ"**[೨೨]

ವರ್ತಮಾನದಲ್ಲಿ ನಿಂತು ಭೂತವನ್ನು ಕೆದುಕುವುದರ ಮೂಲಕ ನಾಯಕ ತಾನು ಕಳೆದುಕೊಂಡ ಬೇರುಗಳನ್ನು ತಲೆಮಾರಿನ ಚರಿತ್ರೆಯ ಹಿನ್ನೆಲೆಯಲ್ಲಿ ಹುಡುಕುತ್ತಿದ್ದಾನೆ. ಚರಿತ್ರೆಯೊಂದಿಗೆ ಮುಖಾಮುಖಿಯಾಗುವ ಆಸೆ ನಾಯಕನದ್ದು. ನಾಗರೀಕತೆಯ ಹಿಂದೆ ದುಃಖ ಮಡುಗಟ್ಟಿರುವುದನ್ನು ನಾಯಕ ಮನಗಂಡಿದ್ದಾನೆ. ಯಾಂತ್ರೀಕರಣದ ನಗರದಿಂದ ನಾಯಕ ಆಘಾತಗೊಂಡಿದ್ದಾನೆ. ತನ್ನ ಹಳೆಯ ಬೇರುಗಳನ್ನು ಹುಡುಕುವುದರ ಮೂಲಕ ತನ್ನ ನೆಲೆಯನ್ನು ಕಂಡುಕೊಳ್ಳುತ್ತಿದ್ದಾನೆ.

'ನನ್ನ ಸುತ್ತಾ' ಕವನದ ನಾಯಕನಲ್ಲೂ ಈ ರೀತಿಯ ಹುಡುಕಾಟವಿದೆ. ಇಲ್ಲಿ ನಾಯಕ ಸೂಕ್ಷ್ಮವಾಗಿ ಪ್ರತಿಯೊಂದನ್ನು ಗಮನಿಸಿದರೂ ಅಸಹಾಯಕನಾಗಿದ್ದಾನೆ. ಯಾವುದೇ ಬದಲಾವಣೆ ಮಾಡಲು ಸಾಧ್ಯವಿಲ್ಲದ ಸ್ಥಿತಿಯಲ್ಲಿದ್ದಾನೆ.

**"ಬೇಜಾರಿನ ಸುತ್ತು**

**ಯಾಂತ್ರಿಕ ಗತ್ತು-**

**ಈ ಮನೆಗಳು ಈ ಜನಗಳು ಈ ನರಕ, ಈ ಪುಲಕ......"**[೨೩]

ಅವನು ಈ ಯಾಂತ್ರೀಕೃತ ಬದುಕಿನಿಂದ ಬೇಸರಗೊಂಡಿದ್ದಾನೆ. ಪ್ರತಿಯೊಂದನ್ನು ಸೂಕ್ಷ್ಮ ಸಂವೇದನೆಯಿಂದ ಗ್ರಹಿಸುವುದರ ಮೂಲಕ ನಗರ ಜೀವನದಲ್ಲಿ ಏಕಾಂಗಿಯಾಗಿ ನಿಂತಿದ್ದಾನೆ. ಮನಃ ತನ್ನ ಜನರೊಂದಿಗೆ ಸೇರಿಕೊಳ್ಳುವ ತವಕದಲ್ಲಿದ್ದಾನೆ. ತನ್ನ ಬೇರುಗಳನ್ನು ಹುಡುಕುವುದರ ಜೊತೆಜೊತೆ ಯಂತ್ರ ನಾಗರೀಕತೆಯನ್ನು ಪ್ರತಿಭಟಿಸುತ್ತಿದ್ದಾನೆ. ನಾಗರೀಕತೆಯ ಟೊಳ್ಳು ಬದುಕಿನೊಂದಿಗೆ ಮುಖಾಮುಖಿ ಗೊಳ್ಳುತ್ತಿದ್ದಾನೆ. ಗ್ರಾಮೀಣ ಪರಿಸರದ ಮನಸ್ಸೊಂದು ನಗರ ಪರಿಸರಕ್ಕೆ ಹೋದಾಗ ಉಂಟಾಗುವ ಪಲ್ಲಟಗಳು, ತಳಮಳ, ಗೊಂದಲವನ್ನು ಲಂಕೇಶರು ಅತ್ಯಂತ ಪರಿಣಾಮಕಾರಿಯಾಗಿ ಶೋಧಿಸುತ್ತಾರೆ. ಇದೇ ರೀತಿಯ ನಾಯಕನ ಚಿತ್ರಣವನ್ನು 'ನಮ್ಮ ಕಡೆಯ ಜನ' ಕವನದಲ್ಲೂ ಕಾಣಬಹುದು. ಇಲ್ಲಿನ ನಾಯಕ ಹಳ್ಳಿ ಮತ್ತು ಪಟ್ಟಣಗಳ ನಡುವೆ ಸಿಕ್ಕಿಕೊಂಡಿದ್ದಾನೆ. ಅವನನ್ನು ಪಟ್ಟಣದ ಸಂಪರ್ಕಕ್ಕೆ ತಂದದ್ದು ವಿದ್ಯಾಭ್ಯಾಸ. ಆದರೆ ಇಂತಹ ವಿದ್ಯಾಭ್ಯಾಸ ಕಲಿತ ಜನರ ದೌಲತ್ತನ್ನು ಕಂಡು ಚಕಿತಗೊಂಡಿದ್ದಾನೆ. ತಮ್ಮ ಹಳ್ಳಿಯ ಜನರ ನಡೆನುಡಿಯನ್ನು ಪಟ್ಟಣದ ಜನರ ಥಳುಕಿನೊಂದಿಗೆ ತುಲನೆ ಮಾಡುತ್ತಿದ್ದಾನೆ.

ಲಂಕೇಶರ ಸಂಕ್ರಾಂತಿ ನಾಟಕವನ್ನು ಗಮನಿಸಿದರೆ ಅಲ್ಲಿ ಬರುವ ನಾಯಕ ರುದ್ರ ಶುದ್ಧಿಗಾಗಿ ಕುದಿಯುವ ಯುವಕ. ಆತನ ಭಾಷೆಯಲ್ಲಿ ನಡೆ-ನುಡಿಯಲ್ಲಿ ಸುಧಾರಣೆಯೊಂದು ಕಂಡುಬರುತ್ತದೆ. ಆತ ವ್ಯವಸ್ಥೆಗೆ ತಿರುಗಿ ಬೀಳುವ, ಪ್ರತಿಭಟಿಸುವ, ಸುಧಾರಣೆಯನ್ನು ಬಯಸುವ ಯುವಕ. ಈ ಎಲ್ಲಾ ಮೌಲ್ಯವನ್ನು ಹೊಂದಿರುವ ಯುವಕನನ್ನು ನಾಟಕದಲ್ಲಿ ನಾವು ನೋಡಬಹುದು. ನಾಟಕಕಾರರಾಗಿ ಇಂತಹ ಪಾತ್ರ ಸೃಷ್ಟಿಮಾಡಿದ ವ್ಯಕ್ತಿ ಕವಿಯಾಗಿ ಕಾವ್ಯ ಬರೆದಾಗ ಅಲ್ಲಿನ ನಾಯಕರ ಚಹರೆ ಎಂತಹದ್ದು ಎನ್ನುವ ಪ್ರಶ್ನೆ ಹುಟ್ಟುತ್ತದೆ. ಅವರ 'ಅವ್ವ' ಕವಿತೆಯಲ್ಲಿ ಇಂತಹ ಯುವಕನ ಮೌನಧ್ಯಾನವಿದೆ. ಸುಧಾರಣೆಯ ಮಿಡಿತವಿದೆ, ಕುದಿಯುವ, ತಿರುಗಿ ಬೀಳುವ ಯುವಕನೊಬ್ಬನ ಮೌನಧ್ಯಾನವನ್ನು ನೋಡಬಹುದು. ಇದುವರೆಗೂ ಇದ್ದ ಪಿತೃಪ್ರಧಾನ ಸಂಸ್ಕೃತಿಯನ್ನು ಹೊಡೆದು ಹಾಕುವ ಕಲ್ಪನೆ ಇದೆ. ಬಹುಶಃ ಪಿತೃಪ್ರಧಾನ ಸಮಾಜದಲ್ಲಿ ಇರುವ ದರ್ಪ, ಅಧಿಕಾರದ ಹಿಡಿತ ಇದಕ್ಕೆ ಕಾರಣವಿರಬಹುದು.

ಆದರೆ ಅವ್ವ-೨ ಕವಿತೆಯ ನಾಯಕನ ನಾಗರೀಕತೆಯಲ್ಲಿ ಮುಳುಗಿಹೋಗಿದ್ದಾನೆ.

**"ದೂರದ ಜಿಲ್ಲೆಯ ಹಸಿದ ಜೀವಕ್ಕೆ ನಾನು**
**ತುತ್ತು ನೀಡಿದ್ದು ಅವ್ವನಂತಲ್ಲ; ನನ್ನ ಅಪ್ಪನಂತೆ**
**ಆತ ಕೊಡುವುದರಲ್ಲಿ ಸುಖ ಕಾಣುತ್ತಿದ್ದ ಮನುಷ್ಯ**
**ಪೂರ್ತಿ ಕೊಟ್ಟುಬಿಡುವ ಮುನ್ನ ಮುಂದಿನ ಚಳಿಗಾಲಕ್ಕೆ**
**ಕಂಬಳಿಗೆಂದು ಕಾಸು ಇಟ್ಟುಕೊಂಡೇ; ಅದು ಅವ್ವನಂತೆ**
**ನನ್ನ ಮನೆಯಂತೆಯೇ ನಾನು ಬಲ್ಲ ನಾಲ್ಕು ಹಿತ್ತಿಲಲ್ಲಿ**
**ನಾಲ್ಕು ಬಾಳೆಗಿಡಗಳು ಬೆಳೆಯಲು ಕಾರಣನಾದೆ;**
**ಆಗ ಈಕೆ ನೆನಪಾದಳು"**[೨]

ಈಗ ಆತ ತನ್ನ ತಾಯಿಯಂತಿಲ್ಲ, ಅಪ್ಪನಂತಿದ್ದಾನೆ. ತನ್ನ ತಾಯಿಯ ನೆನಪು ತನ್ನಲ್ಲಿ ಎಷ್ಟು ಉಳಿದಿದೆ ಎಂದು ಸ್ವವಿಮರ್ಶೆಯನ್ನು ಮಾಡಿಕೊಳ್ಳುತ್ತಾ ಸಾರ್ಥಕ ಬದುಕಿನ ಹುಡುಕಾಟ ನಡೆಸುತ್ತಾ ಇರುವುದನ್ನು ಕಾಣಬಹುದು. ಇಲ್ಲಿ ನಾಯಕ ವ್ಯಕ್ತಿಗತ ನೆಲೆಯಿಂದ ಸಮಾಜಾಭಿಮುಖವಾಗಿ ಚಲಿಸುವ ಕ್ರಿಯೆಯಿದೆ.

ಬಾಲಕನ ಕಣ್ಣುಗಳ ಮೂಲಕ ದೊಡ್ಡವರ ಲೋಕದಲ್ಲಾಗುವ ಸಾಮಾಜಿಕ ಬದಲಾವಣೆಯನ್ನು, ತಲ್ಲಣವನ್ನು ಅರ್ಥಮಾಡಿಕೊಳ್ಳದ ಸ್ಥಿತಿ, ತನ್ನ ಮುಗ್ಧತೆಯನ್ನು ಕಳೆದುಕೊಳ್ಳುತ್ತಿರುವ ನಾಯಕನ ಚಿತ್ರಣವನ್ನು ಅಕ್ಕ – ತಮ್ಮ ಕವಿತೆಯಲ್ಲಿ ಕಾಣಬಹುದು.

"ಅವತ್ತು ನಾನು ಮನೆಗೆ ಬಂದಾಗ ಅಕ್ಕ 'ಯಾಕೋ ಹಿಂಗೆ
ಮೈಕೈನೆತ್ತರು ನಿಂಗ್ಯ'
ಅಂತ ಒರಸಲು ಬಂದಾಗ 'ಹಾಳಾಗು ಕತ್ತೆ ಹಂದಿ ನಾಯಿ'
ಅಂದು ಊಟಕ್ಕೆ ಕೂತಾಗ ನಾಚಿಕೆಯಿಂದ
ಮುಸುಮುಸು ಅತ್ತೆ"[39]

ಬಾಲಕ ಇಲ್ಲಿ ತನಗರಿಯದ ವಿಚಿತ್ರ ಅನುಭವವನ್ನು ಅನುಭವಿಸುತ್ತಾ ತನ್ನ ಅಕ್ಕನ ಮೇಲೆ ಸಿಟ್ಟು, ಅನುಕಂಪವನ್ನು ತೋರುತ್ತಿರುವುದರ ಚಿತ್ರಣವಿದೆ. ಈ ರೀತಿಯ ನಾಯಕರು ಲಂಕೇಶರ ಒಟ್ಟು ಸಾಹಿತ್ಯದಲ್ಲಿ ಪದೇ ಪದೇ ಕಂಡುಬರುತ್ತಾರೆ. 'ಅಕ್ಕ' ಕಾದಂಬರಿಯ 'ಕ್ಯಾತ' 'ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ'ಯ ನಾಯಕರೆಲ್ಲರೂ ಇಂತಹ ನಾಯಕರೇ ಹೀಗೆ ಮಾನವ ಸಂಬಂಧಗಳನ್ನು ಶೋಧಿಸುವ ನಾಯಕರುಗಳಾಗಿ ಚಿತ್ರಿತರಾಗಿದ್ದಾರೆ.

ಸಾಮಾಜಿಕ ಕಾಳಜಿ ಇರುವ ಹಲವು ಕವನವನ್ನು ಲಂಕೇಶರು ರಚನೆಮಾಡಿದ್ದು ಅಲ್ಲಿನ ನಿರೂಪಕ(ನಾಯಕ) ಸಮಾಜದ ಪರ. ಅಲ್ಲಿಯೂ ನಾಯಕ ವ್ಯವಸ್ಥೆಯ ವಿರುದ್ಧ ತಿರುಗಿ ಬೀಳುವ, ಪ್ರತಿಭಟಿಸುವ ಸುಧಾರಣೆಯನ್ನು ಬಯಸುವಂತವನು. ಅವರ 'ಗೋಡೆಯ ಜನ', 'ಮಾವಿನಮರದಡಿಯ ದೃಶ್ಯ', ಕವನದ ನಾಯಕ ಕ್ರಾಂತಿಯ ಕನಸ್ಸನ್ನು ಕಾಣುತ್ತಿದ್ದಾನೆ. ಕೋಮುಸೌಹಾರ್ದತೆಯನ್ನು ಬಯಸುತ್ತಿದ್ದಾನೆ. ಇದುವರೆಗೂ ಇದ್ದ ಜಾತಿ, ಧರ್ಮ, ಕೋಮು ಎನ್ನುವ ಚೌಕಟ್ಟನ್ನು ಮೀರಿ ನಿಲ್ಲಬೇಕು ಎನ್ನುವ ಹಂಬಲವಿದೆ ತುಡಿತವಿದೆ. ಇಲ್ಲಿ ಕಂಡುಬರುವ ನಿರೂಪಕನ ಪ್ರಜ್ಞೆ ಸಮಾಜ ಸುಧಾರಕನ ರೀತಿಯಲ್ಲಿದ್ದು ಸಮಾಜದ ಕುಂದುಕೊರತೆಗಳನ್ನು ನಿವಾರಿಸುವ ಆಕಾಂಕ್ಷೆಯನ್ನು ಹೊತ್ತಿದ್ದಾನೆ. ಇದು ಕೇವಲ ಅವನ ಹಂಬಲ ಮಾತ್ರವಲ್ಲ ಇಡೀ ಸಮಾಜದ ಹಂಬಲವಾಗಿ ಪ್ರಕಟಗೊಂಡಿದೆ.

'ಜೀವಲಿ'ಯಲ್ಲಿ ಕಂಡುಬರುವ ನಾಯಕ ಕೈಗೆ ಸಿಗದ ಹೆಣ್ಣಿಗಾಗಿ ಪರಿತಪಿಸುತ್ತಾನೆ. ಭಗ್ನ ಪ್ರಣಯಿಯಾಗಿ ಕಂಡುಬರುತ್ತಾನೆ. 'ವರ್ಗಗಳು', 'ಕಾಡಬೇಡ ಸರೋಜ' ಕವಿತೆಗಳಲ್ಲಿನ ನಾಯಕನಿಗೆ ತನ್ನ ಹೆಣ್ಣೆ ಸರ್ವಸ್ವಳಾಗಿದ್ದಾಳೆ. ಆ ಹೆಣ್ಣನ್ನು ಬಿಟ್ಟು ಇತರ ಲೋಕವನ್ನು ಗ್ರಹಿಸಲು ಸಾಧ್ಯವಿಲ್ಲದ ಸ್ಥಿತಿಯಲ್ಲಿ ನಾಯಕ ಕಂಡುಬರುತ್ತಾನೆ.

'ನೀಲು'ಕವನದಲ್ಲಿ ನಾಯಕನ ಚಿತ್ರಣ ಎನ್ನುವುದಕ್ಕಿಂತ ನಾಯಕಿ(ನಿರೂಪಕಿ) ಎಂದರೆ ತಪ್ಪಾಗದು. ಏಕೆಂದರೆ ನೀಲುಕವನದ ಮೂರು ಸಂಪುಟಗಳಲ್ಲೂ ಹೆಣ್ಣಿನ ಮೂಲಕವೇ ನಿರೂಪಣೆ

ಮಾಡಲಾಗಿದೆ. ಇಲ್ಲಿ ಬರುವ ನಿರೂಪಕಿ ತನ್ನ ಇನಿಯನ ಬರುವಿಕೆಗಾಗಿ ಕಾದು ಬೇಸತ್ತು ನಿರಾಶೆಯನ್ನು ಹೊಂದಿರುವಂಥವಳು. ಇಲ್ಲಿ ಹೆಣ್ಣು ವ್ಯಕ್ತಪಡಿಸುವ ಆಸೆ, ಇಂಗಿತವೆಲ್ಲವೂ ಸಂಪೂರ್ಣವಾಗಿ ಹೆಣ್ಣಿನವೇ ಎಂದು ಹೇಳಬರುವುದಿಲ್ಲ. ಅವು ಹೆಚ್ಚು ಗಂಡಿನ ಇಂಗಿತಕ್ಕೂ ಹತ್ತಿರವಾಗಿದೆ.

ಹೀಗೆ ಗ್ರಾಮ-ನಗರಗಳ ಜೀವನವನ್ನು ಅನುಭವಿಸುತ್ತಾ, ಉತ್ತಮ ಸಮಾಜವನ್ನು ಕಟ್ಟುವ ವ್ಯಕ್ತಿಯಾಗಿ, ಸಾಂಪ್ರದಾಯಿಕ ಸಂಬಂಧಗಳಾದ ಅಕ್ಕ-ತಮ್ಮ, ತಾಯಿ-ಮಗ ಇಂತಹ ಸಂಬಂಧಗಳಲ್ಲಿ ಸಂವಹನ ಸಾಧಿಸಿಕೊಳ್ಳುವಲ್ಲಿ ಸಾಧ್ಯವಾಗದ ಸ್ಥಿತಿಯನ್ನು ಅನುಭವಿಸುವ, ಹೆಣ್ಣಿನ ಪ್ರೀತಿಯನ್ನು ಬಯಸುವ, ಕೆಲವೊಮ್ಮೆ ಆ ಪ್ರೀತಿಯಿಂದ ವಂಚಿತನಾಗುವ ಭಗ್ನ ಪ್ರಣಯಿಯಾಗಿ, ಜೊತೆಜೊತೆಗೆ ಇವುಗಳೆಲ್ಲದರ ನಡುವೆ ಉತ್ತಮ ಭವಿಷ್ಯಕ್ಕಾಗಿ ಸಮಾಜದ ವಿರುದ್ಧ ಪ್ರತಿಭಟಿಸುವ, ಸುಧಾರಣೆಯನ್ನು ಬಯಸುವ, ತನ್ನ ಬೇರುಗಳನ್ನು ಹುಡುಕುತ್ತಾ ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾ ಇರುವ ವ್ಯಕ್ತಿಗಳೇ ಲಂಕೇಶ್ ಕವನದ ಕೇಂದ್ರಪಾತ್ರಗಳು.

ಇವರು ಕಾವ್ಯರಚನೆ ಮಾಡಲು ಬಳಸಿದ ತಂತ್ರಗಾರಿಕೆಯನ್ನು ಗಮನಿಸುವುದಾದರೆ, ಬಿಡಿ-ಬಿಡಿ ಪದ್ಯಗಳಂತೆ, ಮುಕ್ತಕಗಳಂತೆ ಕಂಡುಬರುತ್ತದೆ. ಕವಿತೆಗಳು ಗದ್ಯ, ಕಥನ ಶೈಲಿಯಲ್ಲಿ ನಿರೂಪಣೆಗೊಂಡಿದೆ. 'ಮಾವಿನಮರದಡಿಯ ದೃಶ್ಯ', 'ವರ್ಗಗಳು', 'ಪುಟ್ಟ', 'ತಲೆಮಾರು', ಈ ಕವಿತೆಗಳು ಕತೆಯ ಶೈಲಿಯಲ್ಲಿ ನಿರೂಪಣೆಯಾಗಿದೆ. ಇಂಚರ, ಬಿಚ್ಚು, ಜೀವಲಿ, ಕವಿತೆಗಳಲ್ಲಿ ಪ್ರಾಸದ ಹಾವಳಿಯನ್ನು ಕಾಣಬಹುದು.

**"ಧಿಮಾಕಿಗೊಗ್ಗರಣೆ ಚಪ್ಪಾಳೆ, ಅಸೂಯೆ ಪ್ರೇಮಕ್ಕೆ**

**ಕೊಬ್ಬು ಕಾಮಕ್ಕೆ, ಪೊಳ್ಳು ಪುಕ್ಕಟೆ ತತ್ವ ಮೋಸಕ್ಕೆ"**

ಇನ್ನೂ ಕಾವ್ಯಭಾಷೆಯನ್ನು ಗಮನಿಸಿದರೆ ಭಾಷೆಯನ್ನು ಮುಕ್ತವಾಗಿ ಬಳಸುತ್ತಾರೆ. "ಗತಕಾಲದ ಭಾಷೆ ಭಾವವನ್ನು ಕೊಲ್ಲುತ್ತದೆ. ಮನಸ್ಸನ್ನು ಮಂಕಾಗಿಸುತ್ತದೆ!" ಎಂಬ ಅಡಿಗರ ಮಾತನ್ನು ಅರ್ಥೈಸಿಕೊಂಡ ಲಂಕೇಶ್ ತಮ್ಮ ಸಾಹಿತ್ಯದಲ್ಲಿ ಭಾಷೆಗೆ ಮುಖಾಮುಖಿಯಾಗುವ ಕ್ರಮವನ್ನು ಕಾಣಬಹುದು. ಅದು ಕಾವ್ಯ, ಕಾದಂಬರಿ, ನಾಟಕ, ವಿಮರ್ಶೆ, ಪತ್ರಿಕೆ ಎಲ್ಲಾ ಕ್ಷೇತ್ರದಲ್ಲೂ ಭಾಷೆಯೊಂದಿಗೆ ಸೆಣಸಾಡುವುದನ್ನು ಗುರುತಿಸಬಹುದು. ಎಷ್ಟೋ ವೇಳೆ ವ್ಯಾಕರಣವನ್ನು ಮೀರಿ ಕಾವ್ಯ ರಚನೆ ಮಾಡಿದ್ದುಂಟು. ಮತ್ತೊಂದು ಅಂಶವನ್ನು ಗಮನಿಸಿದರೆ ಅವರ ಕಾವ್ಯಗಳು ಹಲವು ವ್ಯಕ್ತಿಚಿತ್ರಣವನ್ನು ನೀಡುತ್ತವೆ. 'ಕವೆಂ' ಚಿತ್ರಣವನ್ನು ನಾಲ್ಕೇ ಸಾಲುಗಳಲ್ಲಿ ನೀಡುತ್ತಾ ಕ.ವೆಂ.ರ ಕಾವ್ಯ ನಿರಾಕರಣೆಯನ್ನು ಮಾಡುತ್ತಾರೆ. ವ್ಯಕ್ತಿಚಿತ್ರಣದಲ್ಲೂ ಕಾವ್ಯ ಕುರಿತಾದ ವಿಮರ್ಶೆಗಳನ್ನೇ ಕಾಣಬಹುದು.

ಒಟ್ಟಾರೆ ಲಂಕೇಶರ ಕಾವ್ಯವನ್ನು ಮತ್ತೊಮ್ಮೆ ಪರಿಶೀಲಿಸಿದಾಗ 'ಇಂಚರ' ಕವನ ಸಂಕಲನವನ್ನು ತಮ್ಮ ವಿದ್ಯಾರ್ಥಿ ಜೀವನದಲ್ಲಿ ರಚನೆಮಾಡಿದ್ದರು. ಈ ಕವನಗಳು ಕುವೆಂಪು ಪ್ರಭಾವದಿಂದ ಹುಟ್ಟಿರುವಂತದ್ದು. ಇದಕ್ಕೆ 'ಒಂದುಭೇಟಿ' ಕವನವೇ ಸಾಕ್ಷಿ ಎನ್ನಬಹುದು. ಕವನದಲ್ಲಿ ಒಳ್ಳೆಯ ಹೆಸರು ಮಾಡಿ ಸಮಾಜದಲ್ಲಿ ಉನ್ನತಸ್ಥಾನದಲ್ಲಿದ್ದ ಕವಿ ತಮ್ಮ ಮೇಷ್ಟ್ರರನ್ನು ಭೇಟಿ ಮಾಡಿ ತಮ್ಮ ಬಾಲ್ಯವನ್ನು ನೆನಪು ಮಾಡಿಕೊಳ್ಳುತ್ತಾರೆ. ಆಗ ಮೇಷ್ಟ್ರು 'ನೀವು ಪುಟ್ಟಪ್ಪ ಆಗುವುದು ಖಂಡಿತ ಅಂದಿದ್ದೆ' ಎನ್ನುವ ಮಾತು ಅವರ ಮೇಲೆ ಕುವೆಂಪುರವರ ಪ್ರಭಾವ ಎಷ್ಟಿತ್ತೆಂಬುದಕ್ಕೆ ನಿದರ್ಶನವಾಗಿದೆ.

ಆನಂತರ ರಚನೆ ಮಾಡಿದ 'ತಲೆಮಾರು', 'ಅಕ್ಕ-ತಮ್ಮ', 'ಅವ್ವ', 'ನಮ್ಮ ಕಡೆಯ ಜನರು', 'ನನ್ನ ಸುತ್ತಾ', ಕವಿತೆಗಳು ಹಳ್ಳಿಯಜೀವನ, ಹಾಗೂ ಪಟ್ಟಣದ ಜೀವನದ ನಡುವಿನ ವೈರುಧ್ಯವನ್ನು ಯಂತ್ರ ನಾಗರೀಕತೆಯ ಕಟುವಿಮರ್ಶೆಯನ್ನು ಮಾಡುತ್ತವೆ.

'ಗೋಡೆಯ ಜನ', 'ಮಾವಿನ ಮರದಡಿಯ ದೃಶ್ಯ', 'ಅವಮಾನವೇ ಇಲ್ಲದ ಜೀವಿಗಳು' ಮುಂತಾದ ಕವಿತೆಗಳು ಸಾಮಾಜಿಕ ಕಳಕಳಿ ಹೊಂದಿದ್ದು, ಜಾತಿವಾದ, ಕೋಮುವಾದವನ್ನು ಹತ್ತಿಕ್ಕುವಲ್ಲಿ ಮುಂದಿವೆ. ಈ ಕಾಲಘಟ್ಟದಲ್ಲಿ ಲಂಕೇಶ್ ನವ್ಯತೆಯಿಂದ ನವ್ಯೋತ್ತರದ ಕಡೆಗೆ ಹೊರಳಿದ್ದನ್ನು ಗುರುತಿಸಬಹುದು.

'ಜೀವಲಿ', 'ಪ್ರತಿಭಟನೆಯ ಒಂದು ಮುಖ', 'ಕಾಡಬೇಡ ಸರೋಜ' ಮುಂತಾದ ಕವಿತೆಗಳು ದೇಹ-ಮನಸ್ಸಿನ ದ್ವಂದ್ವವನ್ನು ಅನಾವರಣಗೊಳಿಸುತ್ತಾ ಹೆಣ್ಣಿನ ಚಿತ್ರಣವನ್ನು ನೀಡುವ ಕವಿತೆಗಳಾಗಿವೆ.

ಹೀಗೆ ಲಂಕೇಶ್ ಈಗಾಗಲೇ ಇರುವ ಸಂಸ್ಕೃತಿಯನ್ನು ತಮ್ಮದೇ ಆದ ರೀತಿಯಲ್ಲಿ ಅರ್ಥೈಸಿಕೊಂಡು ಅದರ ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತಾ ಹೊಸ ಸಂಸ್ಕೃತಿಯ ಹುಡುಕಾಟವನ್ನು ತಮ್ಮ ಕವಿತೆಯಲ್ಲಿ ಮಾಡಿದ್ದಾರೆ. ಜಾಗತೀಕರಣ ತಂದ್ದೊಡ್ಡಿದ ಯಂತ್ರ ಜಗತ್ತಿನಿಂದಾಗಿ ಯಜಮಾನ ಸಂಸ್ಕೃತಿ ನಿರ್ಮಾಣದ ಸಾಧ್ಯತೆಯನ್ನು ಅರಿತ ಲಂಕೇಶ್ ಅದರ ವಿರುದ್ಧ ಪ್ರತಿಸಂಸ್ಕೃತಿಯನ್ನು ನಿರ್ಮಿಸುವಲ್ಲಿ ಅವರ ಕಾವ್ಯವನ್ನು ಬಳಸಿಕೊಂಡಿದ್ದಾರೆ.

ಲಂಕೇಶರ ಒಟ್ಟು ಕಾವ್ಯವು ಹೀಗೆ ಗ್ರಾಮ, ನಗರದ ಸಂಸ್ಕೃತಿ, ಸಾಮಾಜಿಕ ಸಂಸ್ಕೃತಿ, ರಾಜಕೀಯ ಸಂಸ್ಕೃತಿಯನ್ನು ಅನಾವರಣ ಗೊಳಿಸುತ್ತದೆ. ಇಲ್ಲಿ ಬರುವ ನಾಯಕನು ಸಾಂಸ್ಕೃತಿಕ ನಾಯಕನಾಗಿ ಭಿತ್ತರಗೊಂಡಿದ್ದಾನೆ. ಇವರ ಕಾವ್ಯದಲ್ಲಿನ ಮತ್ತೊಂದು ವೈಶಿಷ್ಟವೆಂದರೆ ನವ್ಯ, ದಲಿತ ಬಂಡಾಯದ ಧೋರಣೆಯನ್ನು ಪ್ರತ್ಯೇಕವಾಗಿ ನೋಡದೆ ಇವೆರಡನ್ನು ಬಳಸಿ ಸಾಹಿತ್ಯ ರಚನೆ ಮಾಡಿದ್ದಾರೆ. ಈ ರೀತಿಯ ಸಾಂಸ್ಕೃತಿಕ ರಚನೆಯನ್ನು ಲಂಕೇಶ್ ತಮ್ಮ ಒಟ್ಟು ಸಾಹಿತ್ಯದಲ್ಲೂ ಮಾಡಿದ್ದಾರೆ.

## ಕೊನೆ ಟಿಪ್ಪಣಿಗಳು

೧. ಅಕ್ಷರ ಹೊಸ ಕಾವ್ಯ : ಸಂ.ಲಂಕೇಶ್, ಅಕ್ಷರ ಪ್ರಕಾಶನ, ಪುಟ ಸಂಖ್ಯೆ–೧೫

೨. ಅದೇ, ಪುಟ–೧೪

೩. ಚಿತ್ರ ಸಮೂಹ ; ಲಂಕೇಶ್, ಲಂಕೇಶ್ ಪ್ರಕಾಶನ, ಪುಟ ಸಂಖ್ಯೆ–೧೫

೪. ಅದೇ, ಪುಟ–೪೫

೫. ಅದೇ, ಪುಟ–೪೬

೬. ಅದೇ, ಪುಟ–೧೭

೭. ಅದೇ, ಪುಟ–೧೮

೮. ಅದೇ, ಪುಟ–೧೧೦

೯. ಪಿ.ಲಂಕೇಶ್ : ಹಾಲತಿ ಸೋಮಶೇಖರ್, ನವಕರ್ನಾಟಕ ಪ್ರಕಾಶನ, ಪುಟ–೨೩

೧೦. ಪಿ.ಲಂಕೇಶ್; ಕೆ.ಮರುಳಸಿದ್ದಪ್ಪ, ಸಾಹಿತ್ಯ ಕಾಡೆಮಿ, ಪುಟ ಸಂಖ್ಯೆ–೧೨

೧೧. ಚಿತ್ರಸಮೂಹ; ಲಂಕೇಶ್, ಲಂಕೇಶ್ ಪ್ರಕಾಶನ, ಪುಟ ಸಂಖ್ಯೆ–೬೧

೧೨. ಅದೇ, ಪುಟ–೬೬

೧೩. ಅದೇ, ಪುಟ–೮೯

೧೪. ಅದೇ, ಪುಟ–೮೩

೧೫. ಅದೇ, ಪುಟ–೫೦

೧೬. ನೀಲು ಕಾವ್ಯ; ಲಂಕೇಶ್, ಲಂಕೇಶ್ ಪ್ರಕಾಶನ, ಪುಟ ಸಂಖ್ಯೆ–೨೨

೧೭. ಚಿತ್ರಸಮೂಹ; ಲಂಕೇಶ್, ಲಂಕೇಶ್ ಪ್ರಕಾಶನ, ಪುಟ ಸಂಖ್ಯೆ–೩೮

೧೮. ಅದೇ, ಪುಟ–೩೫

೧೯. ಅದೇ, ಪುಟ–೭೨

೨೦. ಅದೇ, ಪುಟ–೭೬

೨೧. ಪಿ.ಲಂಕೇಶ್; ಹಾಲತಿ ಸೋಮಶೇಖರ್, ನವಕರ್ನಾಟಕ ಪ್ರಕಾಶನ, ಪುಟ ಸಂಖ್ಯೆ–೪೧

೨೨. ಚಿತ್ರಸಮೂಹ; ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ–೪೭

೨೩. ಅದೇ, ಪುಟ–೬೭

೨೪. ಅದೇ, ಪುಟ–೧೧೦

೨೫. ಅದೇ, ಪುಟ–೬೧

# ಅಧ್ಯಾಯ – ೪

## ಸಂಸ್ಕೃತಿಯ ಎಲ್ಲಾ ನೆಲೆಗಳನ್ನು ವ್ಯಾಖ್ಯಾನಿಸುವ ನೀಲುಕವನಗಳು

ಲಂಕೇಶರು ಸುಮಾರು ೨೦ ವರ್ಷಗಳ ಕಾಲ ಪತ್ರಿಕೆಗಾಗಿ ಬರೆಯುತ್ತಿದ್ದ ಹಲವು ಕವಿತೆಗಳು 'ನೀಲು' ಶೀರ್ಷಿಕೆಯಲ್ಲಿ ಮೂರು ಸಂಪುಟಗಳಲ್ಲಿ ಹೊರಬಂದಿವೆ. ಒಟ್ಟು ನೀಲು ಕವನವನ್ನು ಗಮನಿಸಿದರೆ ಹದಿನೈದು ಸಾವಿರಕ್ಕೂ ಹೆಚ್ಚು ಸಾಲಿನ ಕವನಗಳ ಗುಚ್ಚ. ಇದರ ಮೂಲಕ ಲಂಕೇಶ್ ಮನುಷ್ಯನ ಅನುಭವ ಲೋಕವನ್ನು ಅನಾವರಣಗೊಳಿಸಿದ್ದಾರೆ. ಈ ಕವನವನ್ನು ಓದುತ್ತಿದ್ದರೆ ಒಂದು ಕ್ಷಣ ಪೋಲಿಪದ್ಯಗಳ ರೀತಿಯಲ್ಲಿ ಕಂಡುಬರುತ್ತದೆ. ಕಾರಣ ಈಗಾಗಲೇ ಇದ್ದ ಕಾವ್ಯ ಜಗತ್ತು ಕಾವ್ಯ ಎಂದರೆ ಅದಕ್ಕೆ ತನ್ನದೇ ಆದ ಚೌಕಟ್ಟು, ಮಿತಿಗಳಿರುವುದನ್ನು ನಿರ್ದೇಶಿಸಿಕೊಂಡಿತ್ತು. ಅಲ್ಲದೆ ಕಾವ್ಯದ ರಚನೆಯು ಹಲವು ಸಾಲುಗಳಿಂದ ಕೂಡಿರುತ್ತಿತ್ತು. ಲಂಕೇಶ್ ಇವೆಲ್ಲವನ್ನು ಮೀರುವುದರ ಮೂಲಕ ನೀಲು ಕವನವನ್ನು ವಿಶಿಷ್ಟವಾದ ಸಾಂಸ್ಕೃತಿಕ ಭಿತ್ತಿಯಂತೆ ಚಿತ್ರಿಸಿದ್ದಾರೆ.

ನೀಲು ಕವನಗಳು ಬಿಡಿ ಬಿಡಿ ಪದ್ಯಗಳಂತಿವೆ. ಇದಕ್ಕೆ ಪ್ರತ್ಯೇಕ ಶೀರ್ಷಿಕೆಯೇನು ಕೊಟ್ಟಿಲ್ಲ. ಒಟ್ಟಾರೆ ಕವನವು ನೀಲು ಹೆಸರಿನಲ್ಲಿ ಪ್ರಕಟಗೊಂಡಿವೆ. ಲಂಕೇಶರು ಈ ಕವಿತೆಯನ್ನು ಪತ್ರಿಕೆಯಲ್ಲಿ ಪ್ರಕಟಿಸುವಾಗ ತಮ್ಮ ಸ್ವಹಸ್ತಾಕ್ಷರದಲ್ಲಿ ಬರೆದ ಸಾಲುಗಳನ್ನೇ ಪ್ರಕಟಿಸುತ್ತಿದ್ದರು. ಅವರ ಬರಹದ ಕೆಲವು ತುಣುಕುಗಳನ್ನು ನೀಲು ಸಂಗ್ರಹದಲ್ಲೂ ಕಾಣಬಹುದು. ಕವಿಯ ಹೆಸರು ಬರೆಯುವ ಕಡೆ 'ನೀಲು' ಎನ್ನುವ ಹೆಸರನ್ನು ನೀಡಿದ್ದಾರೆ. ನೀಲು ಹೆಸರನ್ನು ಕೇಳಿದೊಡನೆ ಈ ನೀಲು ಯಾರು ಎಂಬ ಪ್ರಶ್ನೆ ನಮ್ಮ ಮಸ್ತಕಕ್ಕೆ ಹತ್ತುತ್ತದೆ. ಇಲ್ಲಿ ಲಂಕೇಶರ ಬರವಣಿಗೆಯ ತಂತ್ರಗಾರಿಕೆಯನ್ನು ನೋಡಬಹುದು. ಅವರು ಹೆಣ್ತನವನ್ನು ಆವಾಹನೆ ಮಾಡಿಕೊಂಡು ಪುರುಷ ಲೋಕದ ಅನುಭವ, ಇಂದ್ರಿಯಾನುಭವವನ್ನು, ಒಟ್ಟಾರೆ ಮನುಷ್ಯನ ಅನುಭವ ಲೋಕವನ್ನು ಪಾರದರ್ಶಕದ ಭಾಷೆಯ ಮೂಲಕ ನಾಲ್ಕೇ ನಾಲ್ಕು ಸಾಲುಗಳಲ್ಲಿ ಚಿತ್ರವನ್ನು ಬಿಡಿಸುವಂತಿದೆ. ಈ ನಿಟ್ಟಿನಲ್ಲಿ ನೀಲು ಕಾವ್ಯಕ್ಕೆ ಚಿತ್ರಕವಿತ್ವ ಗುಣವೂ ಇದೆ. ಇಂತಹ ಶೈಲಿಯ ಬರವಣಿಗೆ ಹನ್ನೆರಡನೆಯ ಶತಮಾನದ ವಚನದಲ್ಲಿ ಹಾಗೂ ತ್ರಿಪದಿ, ಕಂದಪದ್ಯದಲ್ಲಿ ಮೂಡಿಬಂದಿದೆ. ಬಹುಶಃ ನೀಲು ಕವನಗಳಿಗೆ ಈ ವಚನ, ತ್ರಿಪದಿ, ಕಂದಪದ್ಯಗಳೇ ಪ್ರೇರಣೆ ಏನೋ ಎಂದೆನಿಸುತ್ತದೆ.

ನೈಸರ್ಗಿಕ ಬಯಕೆಯನ್ನು (ಕಾಮ, ಪ್ರಣಯ, ಪ್ರೇಮ) ಸಾಮಾನ್ಯವಾಗಿ ಸಮಾಜ ಗೌಣವಾಗಿ ಇಡುತ್ತಿತ್ತು. ಅದೇ ಸಂಸ್ಕೃತಿ ಎಂದು ಅರ್ಥೈಸಿತ್ತು. ಇಂಥ ಕಟ್ಟುಕಟ್ಟಳೆಯನ್ನು ಹೊಡೆದು ಹಾಕುವುದರ ಮೂಲಕ ನೀಲು ಕವನ ಅನಾವರಣಗೊಳ್ಳುತ್ತದೆ. ಲಂಕೇಶರು ಪತ್ರಿಕೆಯ ಮೂಲಕ ಪಾರದರ್ಶಕ

ಭಾಷೆಯನ್ನು ಬಳಸಿ ಮನುಷ್ಯನ ಅನುಭವ ಲೋಕದ ಪ್ರತಿನಿಧಿಕರಣವಾಗಿ ನೀಲು ಕವನವನ್ನು ಮನೆ ಮನೆ ತಲುಪಿಸುವಲ್ಲಿ ಯಶಸ್ವಿಯಾಗಿದ್ದರು.

ದೈನಿಕ ಮಹಾ ಕಾವ್ಯದಂತೆ ಮೂಡಿಬಂದಿರುವ ನೀಲು ಕವಿತೆಗಳಲ್ಲಿ ಲಂಕೇಶ್ ನಮ್ಮ ಸುತ್ತಲ ಪರಿಸರವನ್ನು ಗ್ರಹಿಸಿ, ಅನುಭವಿಸಿ ಆ ಮೂಲಕ ಚರಿತ್ರೆ, ವ್ಯಂಗ್ಯ, ವಿಡಂಬನೆ, ಪುರಾಣ, ಮಾನವಶಾಸ್ತ್ರ, ಪ್ರೀತಿ, ಪ್ರೇಮ, ಹಾದರ, ಕಲ್ಲು, ನದಿ, ಕೋಗಿಲೆ, ಗಿಳಿ ಎಲ್ಲದಕ್ಕೂ ಕಾವ್ಯಾತ್ಮಕ ಧ್ವನಿಯನ್ನು ನೀಡಿದ್ದಾರೆ. ಹೀಗೆ ನೀಲು ಲೋಕದೊಂದಿಗೆ ನಿಕಟವಾದ ಸಂಬಂಧವನ್ನು ಇರಿಸಿಕೊಳ್ಳುವುದರ ಮೂಲಕ ಚಲನಶೀಲವಾಗಿದೆ. ಇಲ್ಲಿ ಯಾವುದು ಜಡವಲ್ಲ. ಎಲ್ಲವೂ ಚಲನಶೀಲವಾಗಿದ್ದು ಆಕೆಗೆ ಆಪ್ತವಾಗಿದೆ.

ಮೊದಲೇ ಹೇಳಿದಂತೆ ನೀಲು ಎಂದ ಕೂಡಲೇ ಯಾರಿಗಾದರೂ ಯಾರು ಆಕೆ ಎಂದು ತಿಳಿದುಕೊಳ್ಳುವ ಕುತೂಹಲವಿರುತ್ತದೆ. ಈ ನೀಲು ಯಾರೂ ಅಲ್ಲ ನಮ್ಮ ನಿತ್ಯ ಜೀವನದ ಸಂಗಾತಿ. ಮನುಷ್ಯನ ಬದುಕಿಗೆ ಹಿಡಿದ ಕೈಗನ್ನಡಿ. ಅದು ಅವನ ವ್ಯಕ್ತಿತ್ವ, ವ್ಯಂಗ್ಯ, ಪ್ರೇಮ, ಕಾಮ, ಸಂತೋಷ, ನಿರಾಸೆ, ಬೇಸರ, ದುಃಖ, ಮೌನ, ಹುಟ್ಟು, ಸಾವು, ಲಂಕೇಶರೇ ಕವಿತೆಯಲ್ಲಿ ಹೀಗೆ ಹೇಳುತ್ತಾರೆ.

**"ನೀಲು ಯಾರು ಎಂದು ಕೇಳಿದಿರಾ?"**

**"ಹುಣ್ಣಿಮೆಯ ಬೆಳದಿಂಗಳು ಕಾಮಿನಿಯಲ್ಲಿ**
**ಪ್ರೇಮ ಉಕ್ಕಿಸಿದ ವೇಳೆ**
**ಇನಿಯಾನಿಲ್ಲದ ಹಾಸಿಗೆಯಲ್ಲಿ**
**ಬಿಕ್ಕಳಿಸಿ ಅತ್ತು ಅವನಿಗಾಗಿ ಕಾದು**
**ಆತ ಹಿಂದಿರುಗುವ ಹೊತ್ತಿಗೆ ಅಮಾವಾಸ್ಯೆ**
**ಕವಿದಿತ್ತು**
**ಮತ್ತೆ ಬೆಳದಿಂಗಳ ಹುಣ್ಣಿಮೆಗೆ ಕಾಯುತ್ತಾ**
**ಅವಳು ಇಟ್ಟ ನಿಟ್ಟುಸಿರಲ್ಲಿ**
**ಹುಟ್ಟಿದವಳು ನೀಲು"**[7] .

ಇಲ್ಲಿ ಲಂಕೇಶ್ ಹೆಣ್ಣಿನ ಮೂಲಕ ನಿರೂಪಣೆಯನ್ನು ಮಾಡಿದ್ದಾರೆ. ಆಕೆ ಎಂತಹ ಹೆಣ್ಣು, ಯಾವುದೇ ಸಂಕೋಚ, ಲಜ್ಜೆ, ನಾಚಿಕೆಗೆ ಒಳಗಾಗದ ಹೆಣ್ಣು, ಯಾವುದೇ ಭಯವಿಲ್ಲದೆ ಎಲ್ಲ ಕಟ್ಟುಕಟ್ಟಳೆಯನ್ನು ಮೀರಿ ಮುಕ್ತವಾಗಿ ಬದುಕಿನ ನೈಜ ಸತ್ಯವನ್ನು ಹೊರಹಾಕಿದ್ದಾಳೆ.

ರಚನೆಯಾಗಿರುವ ಹಲವು ಕವನಗಳು ಹೆಣ್ಣೊಬ್ಬಳು ತನ್ನ ಇನಿಯನಿಗಾಗಿ ಕಾದು ಕುಳಿತಿರುವಂತೆ, ಆತನ ಪ್ರೇಮವನ್ನು ಬಯಸುವಂತಹ ಹಲವು ಸಾಲುಗಳನ್ನು ಕಾಣಬಹುದು.

ಅವುಗಳಲ್ಲಿ ಪ್ರೀತಿ, ನಿರಾಶೆ, ಎಲ್ಲವು ಮಡುಗಟ್ಟಿ ನಿಂತಿದೆ. ಅದಕ್ಕೆ ಈ ಕೆಲ ಸಾಲುಗಳೇ ನಿದರ್ಶನವಾಗಿದೆ.

"ನೀನು ಹೋದ ಮೇಲೆ
ನಿನ್ನ ವಾಸನೆ, ಸ್ಪರ್ಶ
ದನಿ
ಮನದಲ್ಲಿ ಬೆಳೆದು
ನೆನಪಿನ ನೀನು
ನಿನಗಿಂತ ನಿಜ
ಆಗುವೆ, ನನ್ನ ನಲ್ಲ"[೨]
-------------
-------------

"ನನ್ನ ಕೆನ್ನೆಯ ಗುಳಿ ಕೂಡ
ಅರ್ಥವಾಗದ ಗಂಡು
ನಿನ್ನ ಹೃದಯವ
ಅರಿಯುವುದು
ಕನಸಿನ ಮಾತು"[೩]

ಮೊದಲನೆ ಕವಿತೆಯಲ್ಲಿ ಹೆಣ್ಣು ತನ್ನ ಇನಿಯನ ದಾರಿಯನ್ನೇ ಕಾಯುತ್ತಿದ್ದಾಳೆ. ಆತ ತನ್ನಲ್ಲಿ ಹುಟ್ಟಿಸಿದ ಕಾತರ, ಬಯಕೆ, ಎಲ್ಲವನ್ನು ಮೆಲುಕು ಹಾಕುತ್ತಿದ್ದಾಳೆ. ಮರುಕ್ಷಣವೇ ತನ್ನ ನಲ್ಲ ತನ್ನನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುತ್ತಿಲ್ಲವಲ್ಲ ಎನ್ನುವ ನಿರಾಶೆಯನ್ನು ವ್ಯಕ್ತಪಡಿಸುತ್ತಿದ್ದಾಳೆ.

ಪ್ರೀತಿ, ಪ್ರೇಮ ಮನುಷ್ಯನನ್ನು ನಿರಂತರವಾಗಿ ತೊಡಗಿಸಿಕೊಳ್ಳುವ ಎಚ್ಚರದ ಸ್ಥಿತಿಯನ್ನು ಈ ಕವಿತೆ ಹೀಗೆ ಚಿತ್ರಿಸುತ್ತದೆ.

"ವೇಶ್ಯೆಯ ಅಂಶವಿಲ್ಲದ
ಯಾವ ಬೆಡಗಿಯೂ
ನೇರವಾಗಿ
'ನಿನ್ನನ್ನು ಪ್ರೇಮಿಸುವೆ'
ಎಂದು ಹೇಳುವುದಿಲ್ಲ"[೪]

ಪ್ರೀತಿ ಎನ್ನುವಂಥದ್ದು ಮನುಷ್ಯನಿಗೆ ಬದಲಾದ ಸ್ವರೂಪದಲ್ಲಿ ಒಂದಲ್ಲ ಒಂದು ಹಂತದಲ್ಲಿ ದೊರೆಯುತ್ತಲೇ ಇರುತ್ತದೆ. ಅದು ತಾಯಿ, ತಂದೆ, ಗೆಳೆಯ, ಗೆಳತಿ, ಮಗು ಹೀಗೆ ಆತ /ಆಕೆ ಪ್ರೀತಿಯನ್ನು ಅನುಭವಿಸುತ್ತಾರೆ. ಒಂದು ಹೆಣ್ಣು ಗಂಡಿಗೆ ಪ್ರೀತಿಯನ್ನು ಕೊಡುವುದು ಆಕೆಯಲ್ಲಿ ವೇಶ್ಯೆಯ ಅಂಶವಿರುವುದರಿಂದಲೇ ಎನ್ನುತ್ತಾಳೆ ನೀಲು. ಪ್ರೀತಿಯನ್ನು ನೀಡುವಾಗ ಮನುಷ್ಯ ಸಂದರ್ಭಕ್ಕೆ ತಕ್ಕಂತೆ ಹಲವು ಸ್ಥಾನಗಳನ್ನು ಪಡೆಯುತ್ತಾನೆ ಎನ್ನುವ ಅಂಶವನ್ನು ಈ ಕವಿತೆ ಹೊರಹಾಕುತ್ತದೆ.

ಪ್ರೇಮ ಎಂಬುದು ಮನುಷ್ಯನ ಏಕಾಂಗಿತನವನ್ನು ದೂರ ಮಾಡುತ್ತದೆ. ಮನುಷ್ಯರಲ್ಲಿ ಮಾನವೀಯ ಸಂಬಂಧಗಳು ಗಾಢವಾಗಿ ಬೆಳೆಯಲು ಕಾರಣವಾಗುತ್ತದೆ . ಇಂತಹ ಗಾಢ ಸಂಬಂಧದಿಂದ ಮನುಷ್ಯ ಏನನ್ನಾದರೂ ಸಾಧಿಸಲು ಸಾಧ್ಯ ಎಂಬ ಅಂಶವನ್ನು ನೀಲು ಕವಿತೆಯು ಹೊರಹಾಕುತ್ತದೆ. ಅಷ್ಟೇ ಅಲ್ಲ ಪ್ರೀತಿ ಜಾತಿ, ಕುಲವನ್ನು ನೋಡಿ ಹುಟ್ಟುವುದಿಲ್ಲ. ಅವೆಲ್ಲವನ್ನು ಮೀರಿ ಪ್ರೀತಿ ಹುಟ್ಟಿಬರುತ್ತದೆ. ಅಂತಹ ಪ್ರೀತಿಯಲ್ಲಿ ಮುಳುಗಿದಾತ ಪುನಃ ಜಾತಿ ಕಟ್ಟಳೆಗೆ ಸಿಲುಕಿಕೊಳ್ಳಲಾರ. ಅವೆಲ್ಲವನ್ನು ಮೀರಿ ನಿಲ್ಲುತ್ತಾನೆ. ಇಂತಹ ಪ್ರೀತಿ ಮನುಷ್ಯ ಸಂಬಂಧವನ್ನು ಮಾನವೀಯಗೊಳಿಸುವ ಮುಖ್ಯ ನೆಲೆಯಾಗಿದೆ. ಹೀಗೆ ನೀಲು ಕವಿತೆಗಳು ಪ್ರೀತಿಯ ಹಲವು ಮಜಲುಗಳನ್ನು ಬದುಕಿನ ಹತ್ತು ಹಲವು ಸನ್ನಿವೇಶದಲ್ಲಿ ಅನುಭವಿಸಿ ಹೇಳುತ್ತದೆ.

**"ಲಕ್ಷಾಂತರ ಕವನ, ಗೀತೆ, ಪುರಾಣಗಳು**
**ಚುಂಬನ ಆಲಿಂಗನಗಳು**
**ಶ್ರದ್ಧೆ, ಭಕ್ತಿಯ ಅವಶೇಷಗಳು**
**ಅವನ ನಗೆಯಲ್ಲಿ**
**ಪ್ರತ್ಯಕ್ಷವಾಗಿ**
**ನಾನು ಜ್ವಾಲೆಯಾಗಿ ಉರಿಯತೊಡಗುವೆ"**[5]

ಹೀಗೆ ಸಾಮಾನ್ಯ ಸಂಗತಿಯನ್ನು ಓದುಗನಿಗೆ ಆಪ್ಯಾಯಮಾನವಾಗಿ ಮನಮುಟ್ಟುವಂತೆ ಹೇಳಲಾಗಿದೆ. ಇಲ್ಲಿ ಮನುಷ್ಯನ ಸಾಮಾನ್ಯ ದಿನನಿತ್ಯ ಅನುಭವವನ್ನು ಚಿತ್ರಕವಿತ್ವಕ್ಕೆ ಒಳಪಡಿಸಲಾಗಿದೆ. ಆದ್ದರಿಂದಲೇ ನೀಲು ಕವಿತೆಗಳು ದೈನಿಕ ಮಹಾಕಾವ್ಯವಾಗಿ ಹೊರಬಂದಿವೆ.

**"ನನ್ನ ಇನಿಯನ ನಲ್ಲೆಯಾದ**
**ನಾನು**
**ಅವನ ತಾಯಿ ಕೂಡ**
**ಎಂಬುದು**

ಅವನು ಒಪ್ಪದಿದ್ದರೂ ನಿಜ"[1]

ಹೆಣ್ಣು ತನ್ನ ಇನಿಯನಿಗೆ ಅವನ ಪ್ರೇಯಸಿ ನಲ್ಲೆಯಾಗಿ ಪ್ರೀತಿಯನ್ನು ಧಾರೆಯೆರೆಯುವುದಷ್ಟೇ ಅಲ್ಲ ಅವನ ತಾಯಿಯಾಗಿಯೂ ಕೂಡ ಆತನನ್ನು ಪೋಷಿಸುತ್ತಾಳೆ. ಹಾಗೆ ತನ್ನ ಜೀವನವನ್ನು ಪೋಷಿಸಿಕೊಳ್ಳುತ್ತಾಳೆ. ಹೀಗೆ ನೀಲು ಕವನಗಳಲ್ಲಿ ಮನುಷ್ಯನ ದೇಹ ಹಾಗೂ ಮನಸ್ಸಿನ ಅನುಭವದ ಸ್ವರೂಪ ಯಾವುದೇ ಅಡೆತಡೆಯಿಲ್ಲದೆ ನೇರವಾಗಿ ಸ್ಪಷ್ಟವಾಗಿ ಪ್ರಕಟಗೊಂಡಿದೆ.

"ಅತ್ಯಂತ ಪಳಗಿದ
ಪತಿವ್ರತೆ ಕೂಡ
ಪತಿಯಲ್ಲದವನ ನೆನಪಿನಿಂದ
ಕ್ಷಣಕಾಲ ಕೆಂಪಾಗುವಳು"[2]

ನೀಲುವಿನದು ಸಾಮಾಜಿಕ ಕಟ್ಟುಪಾಡನ್ನು ಮೀರುವ ಗುಣ, ಸಮಾಜ ಈಗಾಗಲೇ ಹೆಣ್ಣಿನ ಮೇಲೆ ಹೇರಿರುವ ಸಿದ್ಧಮಾದರಿಯನ್ನು ಹೊಡೆದು ಹಾಕುತ್ತಿದ್ದಾಳೆ. ಅದಕ್ಕೆ ಈ ಕವಿತೆಯ ಸಾಲೇ ನಿದರ್ಶನವಾಗಿದೆ. ಆಕೆಯ ಸಾಮಾಜಿಕ ಗೊಡ್ಡು ಸಂಪ್ರದಾಯಗಳಿಗೆ ಸಿಲುಕಿಕೊಂಡ ಜನರನ್ನು ಎಚ್ಚರಿಸುತ್ತಿದ್ದಾಳೆ. ವ್ಯಕ್ತಿತ್ವದ ಶೋಧನೆಯ ಮೂಲಕ ನಿಜಸ್ಥಿತಿಯನ್ನು ಹೇಳುತ್ತಿದ್ದಾಳೆ.

ನೀಲುವಿನಲ್ಲಿ ರಚನೆಯಾಗಿರುವ ಹಲವು ಕವನಗಳು ಹೆಣ್ಣೊಬ್ಬಳು ತನ್ನ ಇನಿಯನಿಗಾಗಿ ಕಾದು ಕುಳಿತ್ತಿರುವಂತೆ ಆತನ ಪ್ರೇಮವನ್ನು ಬಯಸುವ ಹೆಣ್ಣಿನ ಮನಸ್ಸಿನ ಒಳತೋಟಿಯನ್ನು ಹೊರಹಾಕುವ ಹಲವು ಸಾಲುಗಳನ್ನು ಕಾಣಬಹುದು. ಈಕೆ ತನ್ನ ಇನಿಯನಿಗಾಗಿ ಕಾಯುವುದಷ್ಟೇ ಅಲ್ಲ, ಸುತ್ತಲಿನ ಬದುಕಿನ ವಿದ್ಯಮಾನಗಳು ಮನುಷ್ಯರ ಮನಸ್ಸಿನ ವ್ಯಾಪಾರ, ಪ್ರಕೃತಿ, ಹೀಗೆ ಪ್ರತಿಯೊಂದನ್ನು ಗ್ರಹಿಸಿದ್ದಾಳೆ, ಕಂಡು ಬೆರಗಾಗಿದ್ದಾಳೆ. ಅವೆಲ್ಲವನ್ನು ಪ್ರಶ್ನೆ ಮಾಡುತ್ತಾ ಟೀಕಿಸುತ್ತಿದ್ದಾಳೆ. ಹೀಗೆ ಕವನಗಳು ಏಕಕಾಲಕ್ಕೆ ಸಂಸ್ಕೃತಿಯ ವಿವಿಧ ಆಯಾಮಗಳನ್ನು ತೆರೆಯುತ್ತಾ ತನ್ನ ನಲ್ಲನ ಬಗೆಗೆ, ರಾಜಕೀಯ, ನಿಸರ್ಗ, ಮುಖವಾಡದ ಜನರ ಬಗ್ಗೆ ಪ್ರತಿಯೊಂದನ್ನು ವ್ಯಂಗ್ಯ, ವಿಡಂಬನೆಯನ್ನು ರೂಪಕ, ಸಂಕೇತಗಳ ಮೂಲಕ ಟೀಕಿಸಿದ್ದಾಳೆ. ಇಲ್ಲಿನ ರೂಪಕ, ಸಂಕೇತಗಳು ಸಾಲುಗಳಲ್ಲಿ ಸಹಜ ಎನ್ನುವಂತೆ ನಿರ್ಮಿತವಾಗಿದೆ.

ನೀಲುವಿಗೆ ತನ್ನ ಜನರ ಬಗ್ಗೆ ಅನುಕಂಪವಿದೆ. ಅವರ ಮೇಲೆ ನಡೆಯುತ್ತಿರುವ ಶೋಷಣೆಯನ್ನು ಕಂಡು ಕೋಪಗಿದ್ದಾಳೆ. ಬಡತನದ ಬಗ್ಗೆ ಕಂಡು ಮರುಗಿದ್ದಾಳೆ. ತಮ್ಮ ಕೈಯಲ್ಲಿ ಸಹಾಯ ಮಾಡಲಿಕ್ಕೆ ಸಾಧ್ಯವಾದಲ್ಲಿ ಮಾಡಿ ಇಲ್ಲವಾದಲ್ಲಿ ಹೀಯಾಳಿಸುವುದು ಮಾನವೀಯತೆಯ ಧರ್ಮವಲ್ಲ ಎನ್ನುವ ಧೋರಣೆಯನ್ನು ಹೊಂದಿದ್ದಾಳೆ. ಈ ಸಾಲುಗಳು ಬಡತನದ ನೋವನ್ನು ಚಿತ್ರಿಸುವುದನ್ನು ಕಾಣಬಹುದು.

"ಮಾಗಿಯ ಕೊರೆವ ಚಳಿಯಲ್ಲಿ ಸೂರಿಲ್ಲದ ಜನ
ಅಪ್ಪಿಕೊಂಡು ನಿದ್ರಿಸಲು
ಅನ್ನ ಕೊಡಲಾಗದಿದ್ದರೆ
ದಯವಿಟ್ಟು ಕನಿಷ್ಟ
ನಿಂತು ನೋಡಿ ಲಜ್ಜೆಗೊಳಿಸುವ ಅಶ್ಲೀಲತೆ ಬಿಡಿ"[೮]

ಇನ್ನು ಮುಂದುವರೆದು ಸಮಾಜದಲ್ಲಿ ತಲೆಯೆತ್ತುತ್ತಿರುವ ಆಶ್ರಮ, ಸನ್ಯಾಸಿಗಳನ್ನು ಟೀಕಿಸುತ್ತಾಳೆ. ಈ ಸ್ವಯಂ ಘೋಷಿತ ಸಂತರಿಗಿಂತ ತಪ್ಪನ್ನು ಮಾಡಿ ತಿದ್ದುಕೊಂಡು ಬದುಕುವ ಸಾಮಾನ್ಯ ಮನುಷ್ಯ ಎಷ್ಟೋ ಮೇಲು ಎನ್ನುವ ಅಭಿಪ್ರಾಯ ಅವಳದು. ಬೂಟಾಟಿಕೆಯ ಸನ್ಯಾಸಿಗಳು ಮಾಡುವ ಭಾಷಣ ಸಾರಹೀನವಾದದ್ದು ಎಂಬುದನ್ನು ಹೀಗೆ ಚಿತ್ರಿಸುತ್ತಾಳೆ,

"ಸನ್ಯಾಸಿಗಳು ತಮ್ಮ
ಆಧ್ಯಾತ್ಮ ಭಾಷಣದ ಮಧ್ಯೆ
ಮುದ್ದು ಕಂದನ ಕಂಡು
ಕ್ಷಣ
ತೆಪ್ಪಗಾದರು"[೯]

ಇಂತಹ ಸನ್ಯಾಸಿಗಳಿಗೆ ಬೆನ್ನೆಲುಬಾಗಿನಿಂತ ಭ್ರಷ್ಟ ರಾಜಕಾರಣಿಗಳನ್ನು ತರಾಟೆಗೆ ತೆಗೆದುಕೊಳ್ಳುತ್ತಾಳೆ. ಕೆಲ ರಾಜಕಾರಣಿಗಳು ಕೃಷ್ಣ, ಅರ್ಜುನ, ಭೀಮರಿಗೆ ತಮ್ಮನ್ನು ಹೋಲಿಸಿಕೊಂಡು ತಾವೇ ಶ್ರೇಷ್ಠ ಎಂದು ಮೆರೆಯುತ್ತಾ ಭ್ರಷ್ಟರಾಗಿರುವ ವ್ಯಕ್ತಿಗಳನ್ನು ಟೀಕಿಸುತ್ತಾಳೆ. ಇಂತಹ ಕ್ರಾಂತಿಯ ಭ್ರಾಂತಿಯಲ್ಲಿರುವ ಜನಗಳ ನೆಲಕಚ್ಚುವ ಘೋಷಣೆಗಳ ಬಗ್ಗೆ, ವಾಕ್ ಸ್ವಾತಂತ್ರ್ಯ, ಸಂಘ ಸ್ವಾತಂತ್ರ್ಯ, ಡೆಮಾಕ್ರಸಿ ಬಗ್ಗೆ ಮಾತನಾಡುತ್ತಾ ಇಂಥ ಬೊಗಳೆ ರಾಜಕಾರಣಿಗಿಂತ ಹೊಟ್ಟೆ ಪಾಡಿಗಾಗಿ ಮಾಡುವ ರಾಜಕೀಯಗಳೇ ಮೇಲು ಎನ್ನುತ್ತಾಳೆ.

ಅಸ್ತವ್ಯಸ್ತಗೊಂಡಿರುವ ಸಮಾಜದ ಬಗ್ಗೆ ಮಾತನಾಡುವ ನೀಲುವಿಗೆ ದಿಡಿರನೇ ತನ್ನ ಬಾಲ್ಯದ, ತನ್ನ ಹಿಂದಿನ ತಲೆಮಾರಿನಲ್ಲಿರುವ ಜೀವಂತಿಕೆಯ ಬಗ್ಗೆ ನೆನೆಯುತ್ತಾಳೆ. ಈ ಸಾಲುಗಳೇ ಇದಕ್ಕೆ ನಿದರ್ಶನವಾಗಿದೆ.

"ಚಿಕ್ಕಂದಿನಲ್ಲಿ ಅಪ್ಪನ ಸಿಟ್ಟು
ಮಾಸ್ತರ ರಗಳೆ,

ನೆನಪಾಗದ ಪಾಠಗಳು,

ಭಯ

ಎಲ್ಲದರ ನಡುವೆ

ಎಂಥ ಪುಲಕ ಇತ್ತು

ಎನ್ನುವುದು ನನ್ನ ವಿಸ್ಮಯ"೧೦

---------------

---------------

"ಸುಖಕ್ಕಾಗಿ ಕಾತರಿಸುವ ಕೋಟ್ಯಾಂತರ ಜನಕ್ಕೆ

ಹಣ ಬೇಕು, ನೆಲ ಬೇಕು

ಕೆಲವರಿಗೆ ಪ್ರೀತಿ

ಎಲ್ಲೋ ಕೆಲವರಿಗೆ ಕುಗ್ರಾಮದ

ಹಿತ್ತಿಲೊಂದರ ಹೂವು,

ಬಡಜೋಗಿಯ ಹಾಡು"೧೧

ಬದುಕಿನಲ್ಲಿ ಕೆಲವರು ಮನೆ, ಆಸ್ತಿ, ಒಡವೆ, ಅಧಿಕಾರ ಎಲ್ಲವನ್ನು ಅನುಭವಿಸುತ್ತಾರೆ. ಅವರು ತಮ್ಮ ಬದುಕನ್ನು ಐಷಾರಾಮಿಯಾಗಿ ಕಳೆಯಬೇಕು ಎಂದು ಆಸೆ ಪಡುತ್ತಾರೆ. ಆದರೆ ಎಲ್ಲೋ ಕೆಲವರು ಮಾತ್ರ ತಮ್ಮ ಪೂರ್ವಿಕರ ನೆನಪನ್ನು ಮಾಡಿಕೊಳ್ಳುವ ಜೀವಂತ ಬದುಕಿನ ಹುಡುಕಾಟದಲ್ಲಿ ಇರುವವರು. ಇಂಥ ಆಶಯವನ್ನು ಹೊಂದಿರುವವರು ಮಾತ್ರ ಮುಂದಿನ ಪೀಳಿಗೆಗೆ ಏನಾದರೂ ಒಂದು ಹೊಸತನವನ್ನು ನೀಡುವವರು. ಅದು ನೆನಪು, ಸಂಸ್ಕೃತಿ, ಹಾಡು, ಏನಾದರಾಗಬಹುದು. ಇದರ ಮೂಲಕ ಬದುಕನ್ನು ಮತ್ತಷ್ಟು ಉತ್ತಮಗೊಳಿಸಲು ಸಾಧ್ಯ ಎನ್ನುವುದು ನೀಲುವಿನ ಅಭಿಪ್ರಾಯ.

ಮಹಾಭಾರತ, ರಾಮಾಯಣದ ಪಾತ್ರಗಳನ್ನು ನೆನೆದು ವ್ಯಂಗ್ಯ ಮಾಡುವುದರ ಜೊತೆಗೆ ಬದುಕಿನ ಕ್ರಮವನ್ನು ಅನಾವರಣಗೊಳಿಸುವುದನ್ನು ಹಲವು ಕವನಗಳಲ್ಲಿ ಕಾಣಬಹುದು. ಬದುಕನ್ನು ಅರ್ಥೈಸಿಕೊಳ್ಳುವ ಕ್ರಮವಿದೆ. ಬದುಕಿನ ಸುಖದುಃಖಗಳ ಬಗ್ಗೆ ಅದರಲ್ಲಿನ ಪ್ರೀತಿವಿಶ್ವಾಸಗಳ ಬಗ್ಗೆ, ಹೆಣ್ಣಿನ ಸೌಂದರ್ಯ, ನಡವಳಿ ಬೇಸರವನ್ನೇಲ್ಲ ತೆರೆದಿಡುತ್ತದೆ. ಇವೆಲ್ಲದರ ನಡುವೆ ನೀಲುವಿಗೆ ಹಠಾತ್ತನೆ ಹುಟ್ಟು ಸಾವು ಕಾಡುತ್ತದೆ. ಹುಟ್ಟಿದ ಮೇಲೆ ಮನುಷ್ಯ ತನ್ನ ಜೀವನದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಪ್ರೀತಿ, ವಿಶ್ವಾಸವನ್ನು ಪಡೆಯುತ್ತಾನೆ. ಇಂತಹ ಪ್ರೀತಿ, ಕನಸು, ಕಾತರವಿಲ್ಲದ ಪ್ರೇಮ ಯಾವುದೇ ಜೀವಸಂಕುಲವಿಲ್ಲದ ಬಟ್ಟಬಯಲಿನಂತೆ ಹುಟ್ಟು ಸಾವುಗಳ ನಡುವಿನ ಜೀವನ ಈ

ರೀತಿಯದ್ದಾದರೆ ಸಾವು ಮನುಷ್ಯನ ಬದುಕಿನ ಸೃಜನಶೀಲ ಕ್ರಿಯೆಯನ್ನೇ ಇಲ್ಲವಾಗಿಸುತ್ತದೆ. ಕ್ರಮವಾಗಿ ಈ ಉದಾಹರಣೆ ನೋಡಬಹುದು.

"ಹುಟ್ಟು ಮತ್ತು ಸಾವಿನ ನಡುವೆ
ಪ್ರೇಮ ಎಂಬುದು
ದೀರ್ಘ ನಿಟ್ಟುಸಿರು"[೧೨]

-----------

--------------



"ಸಾವು ಖಚಿತ ಅನ್ನಿಸಿದಾಗ
ಯಮ ಜಗುಲಿಯ ಮೇಲೆ ಕಾಯುತ್ತಿದ್ದಾಗ
ಚಿತ್ರಕಾರ ಪಿಕಾಸೋ
ತನ್ನ ಮಹೋನ್ನತ ಚಿತ್ರಗಳನ್ನು ಕೂಡ
ಚಿಂದಿ ಮಾಡುವಂತೆ ನೋಡಿದ"[೧೩]

ಯಾಂತ್ರಿಕ ಜಗತ್ತಿನ ಜೀವನದ ಬಗ್ಗೆ ನೀಲುವಿಗೆ ಸಾಕಾಗಿದೆ. ನಗರ ಜನರ ಮೋಸ, ವಂಚನೆ, ವಿಶ್ವಾಸಘಾತ ಗುಣಗಳಿಂದ ರೋಸಿ ಹೋಗಿದ್ದಾಳೆ. ನಗರೀಕರಣದಿಂದಾಗಿ ಸಂಬಂಧಗಳ ನಡುವಿನ ಬಿರುಕನ್ನು ಕಂಡು ಚಕಿತಳಾಗಿದ್ದಾಳೆ. ನಗರ ಸಂಸ್ಕೃತಿಗಿಂತ ಗುಡ್ಡಗಾಡು ಜನರ ಸಂಸ್ಕೃತಿಯೇ ಮೇಲು ಅವರ ಪ್ರೀತಿ ವಿಶ್ವಾಸವನ್ನು ಹೀಗೆ ನೆನೆಯುತ್ತಾಳೆ.

"ಗುಡ್ಡಗಾಡಿನ ಜನರ
ಪ್ರೀತಿ, ಭಕ್ತಿ, ಭಯದ
ಒಂದಂಶ ಕೂಡ
ಇಲ್ಲದ
ನಗರದ ಜನ
ವಿದ್ಯುತ್ ತಂತಿಯ
ಮೇಲಿನ ಪ್ರೇತಗಳು"[೧೪]

ಹೀಗೆ ಗುಡ್ಡಗಾಡಿನ ಜನರ ಪ್ರೀತಿ, ವಿಶ್ವಾಸವನ್ನು ನೆನೆದು ನಗರ ಜನರಲ್ಲಿ ಸಂಬಂಧಗಳು ಹೇಗೆ ಬಿರುಕು ಬಿಡುತ್ತವೆ ಎಂಬುದನ್ನು ವಿದ್ಯುತ್ ತಂತಿಯ ಮೂಲಕ ಹೇಳುತ್ತಾಳೆ.

ನಗರೀಕರಣ, ಹುಟ್ಟು, ಸಾವಿನ ಬಗ್ಗೆ ಆಳವಾಗಿ ಮಾತನಾಡುವ ನೀಲುವಿನಲ್ಲಿ ವ್ಯಂಗ್ಯ, ತಿಳಿಹಾಸ್ಯ, ವಿಡಂಬನೆಯನ್ನು ಕಾಣಬಹುದು. ಹನಿಗವನಗಳಂತೆ ಈ ರಚನೆಗಳು ಮೂಡಿಬಂದಿವೆ. ಇದಕ್ಕೆ ನಿದರ್ಶನವಾಗಿ ಕೆಲವು ನೀಲು ಕವನಗಳು,

"ಹೆಂಡತಿ ಸತ್ತ ದಿವಸ ದುಃಖ ತಡೆಯಲಾರದೆ
ಮದ್ಯಪಾನ ಮಾಡುತ್ತಾ ಕೂತ ಶ್ರೀಕಂಠ
ಏಳುವಷ್ಟರಲ್ಲಿ
ಸತ್ತದ್ದು ಯಾರೆಂದು ಎಲ್ಲರನ್ನೂ ಕೇಳಿದ"[೧೫]
-----------------------------------
-----------------------------------
"ಪತ್ರಗಳ ಮೂಲಕ ಪ್ರೇಮ ಕುದುರಿಸಿದ
ನಮ್ಮ ಮಿತ್ರನೊಬ್ಬ ಕೊನೆಗೆ
ಪತ್ರ ಬರೆದವಳನ್ನುಕಂಡು
ದಿಗ್ಭ್ರಾಂತನಾಗಿ ನಿಂತು, ಪತ್ರಗಳನ್ನು
ಅಪ್ಪಿಕೊಂಡು ಅಳತೊಡಗಿದ"[೧೬]

ಅಕ್ಕಮಹಾದೇವಿ ತನ್ನ ಇಷ್ಟದೇವ ಚನ್ನಮಲ್ಲಿಕಾರ್ಜುನನ್ನು ಹುಡುಕುವ ರೀತಿಯಲ್ಲಿ ನೀಲು ತನ್ನ ಇನಿಯನನ್ನು ಹುಡುಕುತ್ತಿದ್ದಾಳೆ. ಆದರೆ ತನ್ನ ಕವನ ಅಕ್ಕನ ವಚನಗಳ ಮುಂದೆ ಏನು ಇಲ್ಲ ಎಂದು ಮರುಗುತ್ತಾಳೆ.

"ಚೆನ್ನಮಲ್ಲಿಕಾರ್ಜುನನ್ನು
ಕುರಿತು ಹಾಡಿದ ಅಕ್ಕನ
ಹಾಡಿನ ಮುಂದೆ
ನನ್ನ ಕವನಗಳೆಲ್ಲ
ಮಿಣುಕು ಹುಳುಗಳು ಮಾತ್ರ"[೧೭]

ಎಂದು ಕೊರಗಿದರೂ ಈ ಸಾವಿರಾರು ಸಾಲುಗಳ ರಚನೆ ಹಿಂದಿರುವ ಪ್ರೇರಕಶಕ್ತಿ ಅಕ್ಕನ ವಚನಗಳೇನೋ ಎಂದೆನಿಸುತ್ತದೆ. ಆದರೆ ಇಂತಹ ಕವನಗಳನ್ನು ಕವನಗಳು ಎಂದು ನಾನು ಹೇಗೆ ಕರೆಯಲಿ? ಎನ್ನುವ ಪ್ರಶ್ನೆ ಅವಳಲ್ಲಿ ಹುಟ್ಟಿವೆ. ಕಾವ್ಯಕ್ಕೆ ವ್ಯಾಖ್ಯಾನವನ್ನು ಕೊಡಲು

ಆನಂದವರ್ಧನನಿಂದ ಹಿಡಿದು ಇತ್ತೀಚಿನ ಸಾಹಿತಿಗಳಿಗೂ ಸಾಧ್ಯವಾಗಿಲ್ಲ. ಕಾವ್ಯ ಪ್ರತಿರಚನೆಯಲ್ಲೂ ಹೊಸ ರೂಪವನ್ನು ಪಡೆಯುತ್ತಿರುತ್ತದೆ. ಅದನ್ನು ನೀಲು ಸಾಲುಗಳು ಈ ರೀತಿ ವಿವರಿಸುತ್ತದೆ.

"ಈ ನನ್ನ ಸಾಲುಗಳನ್ನು
ಕವನಗಳೆಂದು ಹೇಗೆ ಕರೆಯಲಿ?
ವಿರಹದ ಕಾತರದ ನಿರಾಶೆಯ ಚುಂಬನದ
ಆಲಿಂಗನದ ಗುರುತುಗಳು.
ಪ್ರಕೃತಿ ಸೂರ್ಯನನ್ನು ಸ್ವಾಗತಿಸುವಾಗ
ನಾನು ಕತ್ತಲೆಯ ಭಿತ್ತಿಯ ಮೇಲೆ
ಚಿತ್ರಿಸಿದ ನಿಟ್ಟುಸಿರುಗಳು"[೧೮]
--------------------
--------------------
"ಹುಟ್ಟು ಹಠಮಾರಿಯೊಬ್ಬ
ಕವಿಯಾಗಲು ಪಣ ತೊಟ್ಟು
ನಿತ್ಯ ಪದಭೇದಿಯಲ್ಲಿ ಬಳಲಿ
ಹುಲ್ಲು ಕಡಿಯುತ್ತಿದ್ದಾಗ
ವಸಂತದ ಮಾವಿನಮರ
ಕೋಗಿಲೆ ಕಂಠದಲ್ಲಿ ಹಾಡಿ
ತನಗೇ ಗೊತ್ತಿಲ್ಲದೆ
ಕವಿಯಾಯಿತು"[೧೯]

ಕಾವ್ಯ ಕಟ್ಟುವ ಕ್ರಮ ತನ್ನಲ್ಲೇ ಹುಟ್ಟಿಬರಬೇಕು. ಯಾವುದು ಸಹಜ, ಅಸಹಜ ಎಂಬುದನ್ನು ಕವಿತೆ ಹೇಳುತ್ತಿದೆ. ಈ ಸಾಲುಗಳು ಬೇಂದ್ರೆಯವರ ಗಿಡಗಂಟೆಗಳಿಂದ ಹೊರಟಿತು ಹಕ್ಕಿಗಳ ಹಾಡು ನೆನಪಿಗೆ ತರುತ್ತವೆ. .

ಹೀಗೆ ಲಂಕೇಶ್ ಹೆಣ್ಣಿನ ಮೂಲಕ ನಿರೂಪಣೆಯನ್ನು ಮಾಡಿದ್ದಾರೆ. ಹಾಗೆಂದು ಎಲ್ಲವು ಸ್ನೇಹ, ಸೆಳೆತ, ಆಕರ್ಷಣೆಯನ್ನೇ ಹೇಳುತ್ತಿವೆ ಎಂದಲ್ಲ. ಅಲ್ಲಿನ ಕಾತರ, ಆಸೆ, ಹೆಚ್ಚು ಗಂಡಿನ ಇಂಗಿತಕ್ಕೂ ಹತ್ತಿರವಾಗಿವೆ. ಇವೆಲ್ಲವನ್ನು ಬಿಡಿ ಬಿಡಿ ಪದ್ಯಗಳಂತೆ, ಮುಕ್ತಕಗಳಂತೆ ಹದಿನೈದು ಸಾವಿರಕ್ಕೂ ಹೆಚ್ಚಿನ ಸಾಲುಗಳ ಮೂಲಕ ಚಿತ್ರಿಸಲಾಗಿದೆ.

"ಈ ನೀಲುವನ್ನು
ಹುಡುಕುತ್ತ, ಹುಡುಕುತ್ತ
ಕೊನೆಗೆ
ತಮ್ಮ ಪ್ರೇಯಸಿಯ
ಕೊಂಕು ನಗೆಯಲ್ಲಿ
ಅವಳ ಕಂಡವರಿದ್ದಾರೆ"[೨೦]

ಓದುಗನ ಲೋಕದ ತಲ್ಲಣ, ತಹತಹ, ಕುತೂಹಲ, ಪ್ರೀತಿ, ಪ್ರೇಮ, ಕಾಮ ಎಲ್ಲವನ್ನು ಕವಿತೆ ತೆರೆದಿಡುತ್ತದೆ. ನೀಲು ಯಾರ ನಲ್ಲೆಯಾದರೂ ಆಗಬಹುದು. ನೀಲುವಿನ ಇನಿಯ ಯಾರ ಇನಿಯನಾದರೂ ಆಗಬಹುದು. ಇಲ್ಲಿ ನೀಲುವಿನ ಇನಿಯನೆ ಓದುಗನೇನೋ ಎಂದು ಭಾಸವಾಗುತ್ತದೆ. ಇಲ್ಲೇ ಲಂಕೇಶರ ಸೃಜನಶೀಲತೆ ಮತ್ತಷ್ಟು ಸ್ಪಷ್ಟವಾಗುತ್ತದೆ.

ಕವನವನ್ನು ನಿರೂಪಣೆ ಮಾಡುವ ಹೆಣ್ಣು ನಿರ್ಭಿಡತೆಯಿಂದ ಇರುವ ಹೆಣ್ಣು ಸಮಾಜ ರೂಪಿಸಿದ ಹಲವು ಗೊಡ್ಡು ಸಂಪ್ರದಾಯದ ವಿರುದ್ಧ ಬಂಡೆದಿದ್ದಾಳೆ.

"ನಾನು ನೀಲುವಾದರೂ
ನೀಲಾಕಾಶ
ಗುಬ್ಬಿ, ಬೆಳೆವ, ಬೆಳ್ಳಕ್ಕಿಗಳ
ಸೊತ್ತು ಎಂಬುದು
ನನ್ನ ಬಂಡಾಯಕ್ಕೆ ಸ್ಫೂರ್ತಿ"[೨೧]

ನೀಲುವಿಗೆ ಯಾವುದೇ ಗಡಿಗಳಿಲ್ಲ ಆಕೆ ಸ್ವಚ್ಛಂದವಾಗಿ ಇರುವ ಹಕ್ಕಿಯಂತೆ, ಯಾವುದೇ ಮಿತಿಯಿಲ್ಲದೆ ಆಕಾಶದವರೆಗೆ ಹಬ್ಬಿದ್ದಾಳೆ. ಅಂದರೆ ಅವಳ ಅನುಭವ ಲೋಕ ದೊಡ್ಡದು. ಜಾತಿ, ಕಾಮದ ಬಗ್ಗೆ ಇರುವ ಸಾಂಸ್ಥಿಕ ರೂಪವನ್ನು ಮೀರಿ ತನ್ನ ಅನುಭವ ಲೋಕವನ್ನು ವಿಸ್ತರಿಸಿಕೊಂಡು ಬೆಳೆದಿದ್ದಾಳೆ. ಲೋಕದಲ್ಲಿ ನಡೆಯುವ ವಿದ್ಯಮಾನಕ್ಕೆ ಸ್ಪಂದಿಸುತ್ತಾಳೆ. ಹೀಗೆ ಲೋಕದೊಂದಿಗೆ ಅಗಾಧವಾದ ಸಂಬಂಧವನ್ನು ನೀಲು ಇರಿಸಿಕೊಂಡಿದ್ದಾಳೆ. ಮನುಷ್ಯನ ಅನುಭವ ಲೋಕದ ಬಹುಮುಖತೆಯನ್ನು ಬದುಕಿನ ಪ್ರತಿ ತಿರುವಿನಲ್ಲಿ ಅಡಗಿರುವ ಸುಪ್ತತೆಯನ್ನು ಬಯಲುಗೊಳಿಸುತ್ತಾಳೆ. ಇದಕ್ಕೆ ಈ ಪದ್ಯವೇ ನಿದರ್ಶನವಾಗಿದೆ.

"ನಾವು ಮನುಷ್ಯರನ್ನು
ಅರ್ಥ ಮಾಡಿಕೊಳ್ಳುವುದು
ಅವರು

ನಮ್ಮ
ಹೃದಯದ ಮೇಲೆ ಬಿಟ್ಟ
ಗುರುತುಗಳಿಂದ"[32]

ಇಲ್ಲಿ ನೀಲುವಿಗೆ ತನ್ನ ಹಿಂದಿನ ತಲೆಮಾರಿನ ನೆನಪು ಕಾಡುತ್ತಿದೆ. ಲಂಕೇಶ್ ಒಬ್ಬ ವ್ಯಕ್ತಿಯಾಗಿ, ಬರಹಗಾರರಾಗಿ ಬೆಳೆದಂತೆಲ್ಲ ಕಾವ್ಯಶಕ್ತಿಯೂ ಅವರ ಆಳದಲ್ಲಿ ವಿಕಸನಗೊಳ್ಳುತ್ತ ನಡೆದದ್ದನ್ನು ಗುರುತಿಸಬಹುದು.

ಪ್ರೇಮ ಮತ್ತು ಕಾಮವನ್ನು ಸಮಾಜ ಗೌಪ್ಯವಾಗಿಡಲು ಪ್ರಯತ್ನಿಸುತ್ತದೆ. ಸಮಾಜದಲ್ಲಿ ಕಾಮ, ಪ್ರೇಮ, ನೀತಿ ಹಾಗೂ ಅನೀತಿಗಳ ನಡುವೆ ಹುಟ್ಟಿಕೊಂಡಿವೆ. ಸಮಾಜದ ಸಂಪ್ರದಾಯವಾದಿಗಳು ಕಾಮವನ್ನು ಗುಪ್ತವಾಗಿಡಲು ಪ್ರಯತ್ನಿಸುತ್ತಾರೆ. ಅದರ ಹೆಜ್ಜೆಗಳು, ರೀತಿ, ನೀತಿಗಳು, ತಿಳಿಯಕೂಡದೆಂಬಂತೆ ಆತ್ಮವಂಚನೆಯ ಮುಚ್ಚಳಿಕೆ ಹಾಕಿದ್ದರು. ಆದರೆ ಲಂಕೇಶ್ ಅವೆಲ್ಲವನ್ನು ಹೊಡೆದುಹಾಕಿ ಹೊಸ ಪ್ರಜ್ಞೆಯನ್ನು ಬೆಳೆಸುವಲ್ಲಿ ಯಶಸ್ವಿಯಾಗಿದ್ದಾರೆ.

"ನೀಲು ಕಾವ್ಯವನ್ನು ಬಿಡಿಯಾಗಿ ಓದಬಹುದು, ಒಂದಕ್ಕೆ ಒಂದನ್ನು ಸಂಬಂಧಕ್ಕೆ ತಂದುಕೊಂಡು ಓದಬಹುದು. ಪ್ರತಿ ಓದುಗರೂ ತಮ್ಮ ತಮ್ಮ ರೀತಿಯಲ್ಲಿ ವರ್ಗೀಕರಿಸಿಕೊಂಡು ಓದಬಹುದು. ಕೊನೆಗೆ ತಮ್ಮ ತಮ್ಮ ಇಚ್ಛೆ, ಆಸಕ್ತಿಗೆ ಅನುಗುಣವಾಗಿ ಈ ಕಾವ್ಯದೊಂದಿಗೆ ತಮ್ಮದೇ ಆದ ಸಂಬಂಧವನ್ನು ಸ್ಥಾಪಿಸಿಕೊಳ್ಳಬಹುದು. ನೀಲು ಕಾವ್ಯ ಕಳೆದ ಇಪ್ಪತ್ತು ವರ್ಷಗಳಲ್ಲಿ ಕವಿತೆಯನ್ನು ಓದುವ ಹೊಸ ಪೀಳಿಗೆಯನ್ನೇ ಸೃಷ್ಟಿಸಿರುವುದನ್ನು ನಾನು ಗಮನಿಸಿದ್ದೇನೆ. ಕವಿತೆಯೆಂದರೆ ಬಹಳ ಪ್ರಯತ್ನದಿಂದ ಯಾರಾದರೂ ಅದನ್ನು ತಿಳಿದವರಿಂದ ವಿವರಿಸಿಕೊಂಡು ಅನುಭವಿಸಬೇಕೆಂಬ ಆ ಪರಿಕಲ್ಪನೆಯನ್ನು ದೂರ ಮಾಡಿರುವ ಯಶಸ್ಸು ನೀಲು ಕಾವ್ಯಕ್ಕಿದೆ. ನೀಲು ಕಾವ್ಯವನ್ನು ಓದಿ ಪದ್ಯ ಹೊಸೆದ, ಹೊಸೆಯುತ್ತಿರುವವರ ಸಂಖ್ಯೆಯೂ ಅಪಾರ. ಈ ಹೊತ್ತಿನ ಹನಿಗವನಗಳ, ಮಿನಿಗವನಗಳ ರಚನೆಯ ವಲಯವನ್ನು ಸಮರ್ಥಿಸುವ, ಪ್ರಶ್ನಿಸುವ ಒಂದು ವಲಯವೇ ನಿರ್ಮಾಣವಾದಂತಿದೆ. ಯಾವ ಪದವನ್ನಾಗಲೀ ಪನ್ ಮಾಡುವ, ಆಶ್ಚರ್ಯ ಮೂಡಿಸಿದ ಜಡ್ಡುಗಟ್ಟಿದ ಪ್ರಾಸ-ಅಂಥ ಸರ್ಕಸ್ಸನ್ನು ಬಿಡಿಸಿ ವಿವರಿಸುವ ರಚನೆಗಳು ನಾಡಿನ ತುಂಬ ವ್ಯಾಪಿಸಿವೆ. ಇಂಥ ಪ್ರಯತ್ನಗಳು ಎಲ್ಲಾ ಕಾಲದಲ್ಲೂ ನಡೆಯುತ್ತಲೇ ಇರುತ್ತವೆ"[33] ಎಂದು ಕಿ.ರಂ.ನಾಗರಾಜುರವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈ ಮಾತಿಗೆ ಉದಾಹರಣೆ ಎಂಬಂತೆ ನೀಲುವಿನ ಬಗ್ಗೆ ಈ.ಚಂದ್ರತಾಳೀಕಟ್ಟೆಯವರು ಹೇಳಿರುವ ಶೈಲಿ ನಾಲ್ಕು ಸಾಲಿನ ಕವಿತೆಗಳಿಂದ ಕೂಡಿದೆ. ಚನ್ನವೀರ ಕಣವಿಯವರು ನೀಲುವಿನ ಶೈಲಿಯಲ್ಲಿ 'ನೀಲುವಿಗೊಂದು ಶಾಲು' ಎನ್ನುವ ಶೀರ್ಷಿಕೆಯಲ್ಲಿ ನೀಲುವಿನ ಬಗ್ಗೆ ತಮ್ಮ

ಅಭಿಪ್ರಾಯವನ್ನು ಮಂಡಿಸಿದ್ದಾರೆ. ಹೀಗೆ ಹಲವರಿಗೆ ನೀಲುವಿನ ರೂಪ, ಶೈಲಿ, ಆಕರ್ಷಿತವಾಗಿ ಕಂಡಿದೆ. ಪ್ರೇರಣೆಯನ್ನು ನೀಡಿದೆ ಎನ್ನಬಹುದು. ಆಧುನಿಕ ಕಾವ್ಯ ಸಂದರ್ಭದಲ್ಲಿ ಹೊಸರೀತಿಯ ಕಾವ್ಯಸೃಷ್ಟಿಸುವಲ್ಲಿ ಲಂಕೇಶ್‌ರವರ ಸೃಜನಶೀಲತೆಯನ್ನು ಕಾಣಬಹುದು.

ನೀಲು ಸಂಗ್ರಹ-೨ರ ಪ್ರಾರಂಭದ ಲೇಖನದಲ್ಲಿ ಬಾನುಮುಷ್ತಾಕ್‌ರವರು ನೀಲುವಿನ ಬಗ್ಗೆ ಅಸೂಯೆ, ಮೆಚ್ಚುಗೆ, ಪ್ರೀತಿ, ವಿಮರ್ಶೆಯೆಲ್ಲವನ್ನು ವ್ಯಕ್ತಪಡಿಸುತ್ತಾರೆ. ಆ ನೀಲು ತನ್ನ ಕವನಗಳಷ್ಟು ಸುಂದರವಾಗಿರದಿರಲಿ ಎಂದು ಹಾರೈಸುತ್ತಾರೆ. ನೀಲು ಕವನಗಳು ರಚನೆಯಾದ ಸಂದರ್ಭದಲ್ಲಿ ಹಲವು ಜನರ ಮನಸ್ಸಿನಲ್ಲಿ ಅಲೆ, ಕಿಚ್ಚು ಎಬ್ಬಿಸಿದ್ದು, ದೈನಿಕ ಮಹಾಕಾವ್ಯದಂತೆ ಮೂಡಿಬಂದಿದೆ.

ಒಟ್ಟಾರೆ ನೀಲು ಅನುಭವದ ನಿಗೂಢತೆಯನ್ನು ಹೇಳುತ್ತಿದೆ. ಹೀಗೆ ತನ್ನ ಅನುಭವಕ್ಕೆ ದಕ್ಕಿದ್ದನ್ನು ವಸ್ತು, ಚಿತ್ರ, ಘಟನೆಯಾಗಿಸಿಕೊಳ್ಳುವಂತೆ ಹೇಳಬೇಕಾಗಿರುವುದನ್ನು, ಸ್ಪಷ್ಟತೆಯನ್ನು ಮೈಗೂಡಿಸಿಕೊಂಡು ಸಂಕ್ಷಿಪ್ತ ನಾಲ್ಕಾರು ಸಾಲುಗಳಲ್ಲಿ ಹೇಳಲಾಗಿದೆ. ಸರಳವಾಗಿ ಓದುಗನೊಳಗೆ ಅರ್ಥದ ಅಲೆಗಳನ್ನುಂಟು ಮಾಡುತ್ತವೆ. ಹೀಗೆ ಓದುಗರಿಗೆ ಇದು ಮನಸ್ಸಿನಲ್ಲಿ ನಿಲ್ಲಲು ಕಾರಣವಾಗಿದೆ.

ಸುಲಲಿತವಾಗಿ ಓದಲು ಸಾಧ್ಯವಿರುವ ನೀಲು ಕವಿತೆಗಳು ಪ್ರೀತಿ, ಪ್ರೇಮ, ಪ್ರಕೃತಿ, ಗುಡ್ಡಗಾಡು ಜನರ ಜೀವನದ ಬಗ್ಗೆ ಹೇಳುತ್ತಾ, ಕಾವ್ಯ ಸೃಷ್ಟಿಯ ಬಗೆಗೆ, ರಾಜಕೀಯ, ಸಾಮಾಜಿಕ, ನಗರೀಕರಣವನ್ನು ಅನಾವರಣಗೊಳಿಸುವ ಕವನಗಳ ಗುಚ್ಛವಾಗಿದೆ. ಮುಕ್ತವಾಗಿ ಅಭಿಪ್ರಾಯವನ್ನು, ಹೊಸ ಅನಿಸಿಕೆ, ನಂಬಿಕೆ, ಪ್ರೇಮದ ಹಲವು ಮಜಲುಗಳನ್ನು ನಾವಿಲ್ಲಿ ಕಾಣಬಹುದು. ಹಾಗೂ ಮಳೆಗಾಲ, ಚಳಿಗಾಲ, ಬಯಕೆ, ಹಕ್ಕಿ, ಸಾವು, ಕಾಮ, ಹಾದರ, ಸ್ನೇಹ, ಪ್ರತಿಭಟನೆ ಎಲ್ಲವನ್ನು ಹೇಳುತ್ತಿದ್ದಾಳೆ.

ಆಯಾ ದಿನಗಳಲ್ಲಿ ತನ್ನ ಸುತ್ತಲೂ ನಡೆಯುವ ಘಟನೆಗಳು, ತನ್ನ ಒಳಗೆ ಉಂಟಾಗುವ ತಲ್ಲಣಗಳು, ಸಂತಸವನ್ನು ಹೇಳಿದ್ದಾಳೆ. ಜೊತೆಗೆ ರಾಜಕೀಯ, ಸಾಮಾಜಿಕ, ಹಾಗೂ ನೈತಿಕ ಜವಾಬ್ದಾರಿಯನ್ನು ಹೇಳಲಾಗುತ್ತಿದೆ. ಹೀಗೆ ಸಾಹಿತ್ಯ, ಸಾಂಸ್ಕೃತಿಕ ಅನನ್ಯತೆಯನ್ನು ಸೃಷ್ಟಿಸಿಕೊಳ್ಳುವಲ್ಲಿ ಲಂಕೇಶರ ನೀಲು ಕಾವ್ಯ ಮಹತ್ವದ ಪಾತ್ರ ನಿರ್ವಹಿಸಿದೆ. ಕಾವ್ಯ ಎನ್ನುವುದು ಗುಬ್ಬಚ್ಚಿಗೂಡಿನಂತೆ ಎನ್ನುವ ಲಂಕೇಶ್ ನೀಲುಕಾವ್ಯವನ್ನು ಗುಬ್ಬಚ್ಚಿ ಗೂಡಿನ ರೀತಿಯಲ್ಲಿ ಎಣೆಎಣೆಯಾಗಿ ಹೆಣೆದಿದ್ದಾರೆ. ಇಂತಹ ಕವನದಲ್ಲಿ ಲಂಕೇಶ್ ಹೊಸ ರೂಪದ ಸೃಷ್ಟಿಮಾಡಿ ದೈನಂದಿನ ಸಾರ್ವಕಾಲಿಕ, ಖಾಸಗಿ ಮತ್ತು ವಿಶಾಲ ಚೌಕಟ್ಟಿನ ಅನುಭವವನ್ನು ಹೇಳುತ್ತಾ ಸಂಸ್ಕೃತಿಯ ಎಲ್ಲಾ ಆಯಾಮಗಳನ್ನು ವ್ಯಾಖ್ಯಾನಿಸುತ್ತಾರೆ.

## ಕೊನೆ ಟಿಪ್ಪಣಿ

೧. ನೀಲು ಕಾವ್ಯ ಸಂಗ್ರಹ-೧; ಲಂಕೇಶ್, ಲಂಕೇಶ್ ಪ್ರಕಾಶನ, ಪುಟ ಸಂಖ್ಯೆ-೩

೨. ನೀಲು ಕಾವ್ಯ ಸಂಗ್ರಹ-೩; ಲಂಕೇಶ್, ಲಂಕೇಶ್ ಪ್ರಕಾಶನ, ಪುಟ ಸಂಖ್ಯೆ-೧೧

೩. ಅದೇ, ಪುಟ -೫

೪. ನೀಲುಕಾವ್ಯ ಸಂಗ್ರಹ-೧, ಲಂಕೇಶ್, ಲಂಕೇಶ್ ಪ್ರಕಾಶನ, ಪುಟ ಸಂಖ್ಯೆ-೧೦೬

೫. ಅದೇ, ಪುಟ-೩೯

೬. ಅದೇ, ಪುಟ - ೮೫

೭. ಅದೇ, ಪುಟ - ೭೭

೮. ಅದೇ, ಪುಟ -೧೦

೯. ನೀಲು ಕಾವ್ಯ ಸಂಗ್ರಹ-೩, ಲಂಕೇಶ್; ಲಂಕೇಶ್ ಪ್ರಕಾಶನ, ಪುಟಸಂಖ್ಯೆ-೩

೧೦. ನೀಲು ಕಾವ್ಯ ಸಂಗ್ರಹ-೧, ಲಂಕೇಶ್; ಲಂಕೇಶ್ ಪ್ರಕಾಶನ, ಪುಟಸಂಖ್ಯೆ-೧೬

೧೧. ಅದೇ, ಪುಟ-೭೧

೧೨. ನೀಲುಕಾವ್ಯ ಸಂಗ್ರಹ-೨, ಲಂಕೇಶ್; ಲಂಕೇಶ್ ಪ್ರಕಾಶನ, ಪುಟಸಂಖ್ಯೆ - ೧೧

೧೩. ನೀಲುಕಾವ್ಯ ಸಂಗ್ರಹ-೩, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ - ೨೦೩

೧೪. ಅದೇ, ಪುಟ-೧೭೫

೧೫. ನೀಲುಕಾವ್ಯ ಸಂಗ್ರಹ-೧, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ - ೨೭

೧೬. ಅದೇ, ಪುಟ-

೧೭. ನೀಲುಕಾವ್ಯ - ಸಂಗ್ರಹ -೨, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ-೧೮

೧೮. ನೀಲುಕಾವ್ಯ-ಸಂಗ್ರಹ-೧, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ - ೧೬೯

೧೯. ಅದೇ, ಪುಟ -೧

೨೦. ನೀಲುಕಾವ್ಯ ಸಂಗ್ರಹ-೨, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ-೬೯

೨೧. ನೀಲುಕಾವ್ಯ-ಸಂಗ್ರಹ-೧, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ-೧೧೨

೨೨. ನೀಲುಕಾವ್ಯ-ಸಂಗ್ರಹ-೨, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ-೧೭೮

೨೩. ನೀಲು ಕಾವ್ಯ ಸಂಗ್ರಹ-೧, ಲಂಕೇಶ್, ಲಂಕೇಶ್ ಪ್ರಕಾಶನ, ಮುನ್ನುಡಿ

## ಅಧ್ಯಾಯ – ೫

## ಬೋದಿಲೇರನ ಮೂಲಕ ಸಂಸ್ಕೃತಿಯನ್ನು ಗ್ರಹಿಸುವ ಕ್ರಮ

## (ಲಂಕೇಶರ ಅನುವಾದ ಕಾವ್ಯಗಳ ಹಿನ್ನೆಲೆಯಲ್ಲಿ)

ಭಾಷಾಂತರವೆಂಬುದು ಸೃಜನಾತ್ಮಕ ಚಟುವಟಿಕೆ ಎನ್ನುವುದರಿಂದ ಹಿಡಿದು ಅದೊಂದು ಯಃಕಶ್ಚಿತ್ ಅಂಚಿನ ಚಟುವಟಿಕೆ ಎನ್ನುವವರೆಗೂ ಹಲವು ಅಭಿಪ್ರಾಯಗಳು ಈ ಶಿಸ್ತಿನ ಬಗೆಗಿದೆ. ಈ ಭಾಷಾಂತರ ಅಧ್ಯಯನ ಹುಟ್ಟಿರುವುದೇ ಭಾಷಾಶಾಸ್ತ್ರ ಸಾಹಿತ್ಯಕ ಅಧ್ಯಯನ, ಇತಿಹಾಸ, ಮಾನವಶಾಸ್ತ್ರ, ಸಮಾಜಶಾಸ್ತ್ರ, ಮಾನವಕುಲಶಾಸ್ತ್ರ ಇಂತಹ ಬಹುಶಿಸ್ತುಗಳಲ್ಲಿ ಕೆಲಸ ಮಾಡುವ ಮೂಲಕ. ಹೀಗಾಗಿ ಭಾಷಾಂತರ ಅಥವಾ ಅನುವಾದ ಅದೊಂದು ಯಕಶ್ಚಿತ್ ಅಂಚಿನ ಚಟುವಟಿಕೆಯಾಗಿ ಇಂದು ಉಳಿದಿಲ್ಲ. ಭಾಷಾಂತರವೇ ಇವತ್ತು ಮತ್ತು ಯಾವತ್ತಿಗೂ ಸಾಂಸ್ಕೃತಿಕ ಚರಿತ್ರೆಯ ಬದಲಾವಣೆಗಳನ್ನು ನಿರ್ದೇಶಿಸುವ ಪ್ರಮುಖ ಚಾಲಕಶಕ್ತಿ ಎಂಬ ಬಹುಮುಖ್ಯ ವಿಚಾರವನ್ನು ಒಂದು ಶಿಸ್ತಾಗಿ ಇದು ಸ್ವಯಂ ಮಂಡಿಸುತ್ತದೆ.

ಅನ್ಯ ಸಂಸ್ಕೃತಿಯಲ್ಲಿ ಜನ್ಮತಾಳಿದ ಕೃತಿಯನ್ನು ಮತ್ತೊಂದು ಸಂಸ್ಕೃತಿಯಲ್ಲಿ ಭಾಷಾಂತರಿಸುವಾಗ ಅಲ್ಲಿ ಭಾಷೆ ಮಾತ್ರ ಅನುವಾದವಾಗುತ್ತಿರುವುದಿಲ್ಲ. ಅಲ್ಲಿನ ಸಂಸ್ಕೃತಿಯೂ ಅನುವಾದವಾಗುತ್ತಿರುತ್ತದೆ. ಆದ್ದರಿಂದ ಅನುವಾದವೆಂದರೆ ಸಂಸ್ಕೃತಿಯ ವರ್ಗಾವಣೆಯೂ ಹೌದು.

ಭಾಷಾಂತರ ಎನ್ನುವುದು ಮಾನವನ ಮುಖ್ಯ ಸಾಂಸ್ಕೃತಿಕ ಚಟುವಟಿಕೆಗಳಲ್ಲೊಂದು. ಅಮೂರ್ತ ಆಲೋಚನೆಯನ್ನು ಶಬ್ದಕ್ಕಿಡುವುದೂ ಭಾಷಾಂತರವೇ. ಒಂದು ಸಂಸ್ಕೃತಿಯಲ್ಲಿ ಮೂಡಿದ ಕೃತಿಯನ್ನು ಮತ್ತೊಂದು ಸಂಸ್ಕೃತಿಯಲ್ಲಿ ಮರುಸೃಷ್ಟಿ ಮಾಡುವುದು ಭಾಷಾಂತರವೇ ಎನ್ನಬಹುದು. ಇಂತಹ ಭಾಷಾಂತರವೇ ಇವತ್ತು ಮತ್ತು ಯಾವತ್ತಿಗೂ ಸಾಂಸ್ಕೃತಿಕ ಚರಿತ್ರೆಯ ಬದಲಾವಣೆಗಳನ್ನು ನಿರ್ದೇಶಿಸುವ ಪ್ರಮುಖ ಚಾಲಕಶಕ್ತಿ, ಹಾಗಾಗಿ ಅನುವಾದವೆಂಬುದು ಒಂದು ಸಂಸ್ಕೃತಿಯ ವ್ಯಾಖ್ಯಾನ ಅಥವಾ ಸಂಸ್ಕೃತಿಯ ವರ್ಗಾವಣೆ ಎಂದೇ ಹೇಳಬಹುದು. ಇಂತಹ ಅನುವಾದಗಳಲ್ಲಿ ಲಂಕೇಶ್ ತಮ್ಮನ್ನು ತೊಡಗಿಸಿಕೊಂಡು ತಮ್ಮ ಸೃಜನಶೀಲತೆಯನ್ನು ಮೆರೆದಿದ್ದಾರೆ.

ಕತೆ, ನಾಟಕ, ಕಾವ್ಯ, ಕಾದಂಬರಿಯನ್ನು ಮಾತ್ರ ರಚಿಸದ ಲಂಕೇಶ್ ಸೋಫೋಕ್ಲಿಸ್‌ನ 'ದೊರೆ ಈಡಿಪಸ್' ಮತ್ತು 'ಅಂತಿಗೊನೆ' ನಾಟಕವನ್ನು ಅನುವಾದ ಮಾಡಿದ್ದು, ಹಲವು ಪಾಶ್ಚಾತ್ಯ ಕವಿಗಳಾದ ಎಜ್ರಾಪೌಂಡ್, ಆ್ಯಂಡ್ರೂಮಾರ್ವೆಲ್, ಡಬ್ಲ್ಯೂ.ಬಿ.ಏಟ್ಸ್. ಕವಿಗಳ ಕವನವನ್ನು ಹಾಗೂ ಬೋದಿಲೇರನ ಕವನವನ್ನು 'ಪಾಪದ ಹೂವುಗಳು' ಶೀರ್ಷಿಕೆಯ ಅಡಿಯಲ್ಲಿ ಅನುವಾದ ಮಾಡಿದ್ದಾರೆ.

ಬೋದಿಲೇರ್ (೧೮೨೧-೧೮೬೭) ಪ್ರಥಮ ನವ್ಯಕವಿ. ಈತನ "ಬದುಕಿನ ಒಂದು ವಿಚಿತ್ರವಾದ ಸಂಗತಿ ಎಂದರೆ ಅವನು ಹುಟ್ಟಿದಾಗ ಅವರಪ್ಪನಿಗೆ ೬೨ ವರ್ಷ. ಆ ಮಗು ತಂದೆಯ ಜೊತೆಗೆ ವಾಕಿಂಗ್ ಹೋಗುತ್ತಿದ್ದಾಗ ಸ್ನೇಹಿತರೆಲ್ಲ ತಾತನ ಜೊತೆಗೆ ಹೋಗುತ್ತಿದ್ದಾನೆ ಎನ್ನುತ್ತಿದ್ದರು. ಮಕ್ಕಳಾಗಿದ್ದಾಗ ಯಾವುದೋ ನಮಗರಿವಿಲ್ಲದ ಒಂದು ಅನುಭವವೋ, ಒಂದು ಇಂಪ್ರೆಷನ್ನೋ, ಅಥವಾ ಒಂದು ನೋವೋ ಥಟ್ಟಂತ ಒಳಗೆ ಹೋಗಿ Subconscious ನಲ್ಲಿ ಸಿಕ್ಕಿಹಾಕಿಕೊಂಡು ಬಿಡುತ್ತದೆ. ಇದು ಆ ಥರದ ಒಂದು ಘಳಿಗೆ, ತಂದೆಯ ಬಗ್ಗೆ ಬೋದಿಲೇರ್‌ಗೆ ಬಹಳ ಗೌರವ. ಆದರೆ ವಯಸ್ಸಿನ difference ಬಹಳ ಇದೆ. ಇಪ್ಪತ್ತನಾಲ್ಕು ವಯಸ್ಸಿರಬಹುದು ಅವನ ತಾಯಿಗೆ. ಈ ಥರ ಹೊಂದಾಣಿಕೆ ಇಲ್ಲದ ಮದುವೆ ಅವರದು. ಬೋದಿಲೇರ್‌ನ ತಂದೆ ೬೮ನೇ ವಯಸ್ಸಿನಲ್ಲಿ ಸತ್ತಾಗ ಆಕೆ ಬೇರೆ ಮದುವೆ ಮಾಡಿಕೊಂಡಳು. ತಾಯಿಯ ಬಗ್ಗೆ ತೀವ್ರವಾದ ಪ್ರೀತಿ ಇರುವಂಥ ಇವನಿಗೆ ತಾಯಿ ಬೇರೆ ಮದುವೆ ಮಾಡಿಕೊಂಡ ತಕ್ಷಣ ತನ್ನ ತಂದೆಗೆ ದ್ರೋಹ ಬಗೆಯುತ್ತಿದ್ದಾಳೆ ಎನಿಸಿತು. ಇಡೀ ಜೀವನದಲ್ಲಿ ಬೋದಿಲೇರ್‌ಗೆ ಇದ್ದ ಒಂದೇ ಒಂದು ಸಂಬಂಧ ತಾಯಿಯೆಂದು ಒಬ್ಬ biographer ಹೇಳುತ್ತಾನೆ. ಹೀಗಾಗಿ ಯಾವುದೋ ಒಂದು ಹಂತದಲ್ಲಿ ತನ್ನ ತಾಯಿ ತನಗೆ ಮತ್ತು ತನ್ನ ತಂದೆಯ ನೆನಪಿಗೆ ದ್ರೋಹ ಬಗೆಯುತ್ತಿದ್ದಾಳೆ ಎಂದುಕೊಳ್ಳುತ್ತಾನೆ.

ಹುಡುಗನಾಗಿದ್ದಾಗ ಈತ ಬಹಳ ಬುದ್ಧಿವಂತ. ಆತ ಸ್ಕೂಲಲ್ಲಿ ಇರುವಾಗ ಅವನ ಮಲತಂದೆ ಅವನನ್ನು ಭಾರತದ ಅಥವಾ ಪೌರ್ವಾತ್ಯ ದೇಶಗಳಿಗೆ ಕಳುಹಿಸಿದರೆ ಸ್ವಲ್ಪ Civilize ಆಗಬಹುದು ಅಥವಾ ಬದಲಾವಣೆ ಆಗಬಹುದು ಅಂತ ಬೋದಿಲೇರ್‌ನನ್ನು ಕಳುಹಿಸುತ್ತಾನೆ. ಆದರೆ, ಬೋದಿಲೇರ್ ಮಾರಿಷಸ್‌ನಲ್ಲಿ ಹಡಗಿನಿಂದ ಇಳಿದು ವಾಪಸ್ಸು ಬಂದು ಸ್ವಚ್ಛಂದವಾಗಿ ಬದುಕಿದ – ಮಾನಸಿಕವಾಗಿ ಮತ್ತು ವೈಯಕ್ತಿಕ ಜೀವನದಲ್ಲಿ Literally ಮತ್ತು Metaphorically ಎರಡೂ ಅರ್ಥದಲ್ಲಿ ಸ್ವಚ್ಛಂದವಾಗಿ ಬದುಕುವುದಕ್ಕೆ ಹಾಗೂ ಆಲೋಚನೆ ಮಾಡುವುದಕ್ಕೆ ಶುರುಮಾಡಿದ. ಯಾವ ರೀತಿಯ ಬಂಧನವೂ ಇಲ್ಲದೆ ಯಾವ ರೀತಿಯ ಪೂರ್ವಗ್ರಹಗಳೂ ಇಲ್ಲದೆ. ಯೋಚನೆ ಮಾಡೋದನ್ನು ಮತ್ತು ಬರೆಯೋದನ್ನು ಶುರುಮಾಡಿದ. ಇವನ ಜೀವನದಲ್ಲಿ ಆ ಸಂದರ್ಭದಲ್ಲಿ ಅನೇಕ ಹೆಣ್ಣುಮಕ್ಕಳು ಬಂದು ಹೋದರು. ಇಬ್ಬರು ಹೆಣ್ಣುಗಳು ಅಗಾಧವಾದ ಪರಿಣಾಮ ಬೀರಿದರು.

ಒಬ್ಬಳು ಜೀನ್‌ದುವಲ್, ಇನ್ನೊಬ್ಬಳು ಆ್ಯಪಲೀನ್. ಒಬ್ಬಳು ಕಪ್ಪು ಹೆಣ್ಣು, ಮಹಾ ವಿಚಿತ್ರವಾದ ಸುಂದರಿ. ವಿಲಕ್ಷಣವಾದ ಸೌಂದರ್ಯ. ಅವಳಿಗೆ ನಿಷ್ಠೆಯಿಲ್ಲ. ಅವಳಿಗೆ ಇಂಥವನ ಸಂಗವನ್ನೇ ಮಾಡಬೇಕೆನ್ನುವ ನಿಯಮ ಇಲ್ಲ. She just lives ಅದು ಬೋದಿಲೇರ್‌ಗೆ ಗೊತ್ತಿಲ್ಲವೆಂದಲ್ಲ. ಹಾಗೆ ಗೊತ್ತಿದ್ದೂ ಕೂಡ ಅದೇ ಅವಳ ಬಗೆಗಿನ ಆಕರ್ಷಣೆಯಾಗಿತ್ತೇನೋ ಗೊತ್ತಿಲ್ಲ. ಇನ್ನು

ಆ್ಯಪಲೀನ್ ಅನ್ನೋಳು Cultivated ಹೆಂಗಸು. ಆಕೆಯೂ ಸುಂದರಿ. ಇವನು ಆಕೆಯನ್ನು ದೈವತ್ವದ ಮಟ್ಟದಲ್ಲಿಟ್ಟು ನನ್ನಲ್ಲಿ ಏನನ್ನೂ ನಿರೀಕ್ಷಿಸದೆ ನನ್ನ ಸ್ನೇಹವನ್ನು ಮಾಡಿದ್ದಾನಲ್ಲ ಅಂತ ಆಕೆ ತನ್ನನ್ನು ತಾನು ಇವನಿಗೆ ಅರ್ಪಿಸಿಕೊಳ್ಳುತ್ತಾಳೆ. ಅದೂ as an act of gratituded. ಇವನ ಜೀವನ ಚರಿತ್ರಕಾರ ಹೇಳುವ ಹಾಗೆ ಬೋದಿಲೇರ್ ಇಡೀ ಜೀವನ ಅವನು ಸಾಯೋವರೆಗೂ virgin ಆಗಿದ್ದ"[7] ಎನ್ನುತ್ತಾನೆ. ಫ್ರೆಂಚ್ ಸಾಹಿತಿ ವ್ಯಾಲರಿ ಹೇಳುವುದು – "ಫ್ರೆಂಚ್ ಸಾಹಿತ್ಯದಲ್ಲಿ ಬೋದಿಲೇರನಿಗಿಂತ ದೊಡ್ಡ ಕವಿಗಳು ಹೆಚ್ಚು ಪ್ರತಿಭೆಯುಳ್ಳ ಕವಿಗಳು ಇರಬಹುದು. ಆದರೆ ಬೋದಿಲೇರನಿಗಿಂತ ಮುಖ್ಯ ಕವಿ ಬೇರೊಬ್ಬನಿಲ್ಲ", ಎಂದರೆ, "ಕತ್ತಲ ಜಗತ್ತನ್ನು ಪ್ರವೇಶಿಸಿ ಹೊರಹೋಗುವ ಎಲ್ಲ ಬಾಗಿಲುಗಳನ್ನು ಬೋದಿಲೇರ್ ಮುಚ್ಚಿಕೊಂಡ" ಎಂದು ಸಾರ್ತರ್ ಹೇಳುತ್ತಾನೆ.

ಚಾರ್ಲ್ಸ್ ಬೋದಿಲೇರ್ ರೊಮ್ಯಾಂಟಿಕ್ ಧೋರಣೆಗಳು ಉತ್ಕೃಷ್ಟವಾಗಿದ್ದ ಸಂದರ್ಭದಲ್ಲಿ ಆ ಧೋರಣೆಗಳಿಗೆ ವಿರುದ್ಧವಾಗಿದ್ದ ಹೊಸ ಧೋರಣೆಗಳಿಂದ ಕೃತಿಯನ್ನು ರಚನೆಮಾಡಿ ಎಲ್ಲರ ವೈರತ್ವವನ್ನು ಕಟ್ಟಿಕೊಳ್ಳಬೇಕಾಯಿತು. ನಾಗರೀಕ ಟೊಳ್ಳು ಬದುಕಿನ ಆಳವಾದ ನೋವುಗಳನ್ನು ಬಿಚ್ಚಿ ಇಡತೊಡಗಿದ್ದೇ ಹಲವಾರು ರೊಮ್ಯಾಂಟಿಕ್ ಕವಿಗಳಿಂದ, ಸರ್ಕಾರದಿಂದ ತಿರಸ್ಕರಿಸಲ್ಪಟ್ಟ. "ಇಪ್ಪತ್ತನೆಯ ಶತಮಾನದ ವ್ಯಸನ, ವ್ಯಥೆಯನ್ನು ಹತ್ತೊಂಭತ್ತನೆ ಶತಮಾನದ ಮೊದಲ ಭಾಗದಲ್ಲೇ ಸಂವೇದಿಸಿದಂತವನು. ದೇವರನ್ನು ತಿರಸ್ಕರಿಸಿ ರೊಮ್ಯಾಂಟಿಕ್ ಪೋಸ್‌ಗಳನ್ನು ಖಂಡಿಸಿ ಬೋದಿಲೇರ್ ಪಾಪಕೂಪದಲ್ಲಿ ಮುಳುಗಿದ; ಈ ಜಗತ್ತಿನಲ್ಲಿ ದೇವರಿರುವುದಾದರೆ ಅದು ಸೂಳೆಯ ಚಂಚಲತೆಯಲ್ಲಿ, ಹೂವಿನ ಪರಿಮಳದಲ್ಲಿ, ಜೂಜುಕೋರರ ಪಗಡೆಯಲ್ಲಿ ವ್ಯಕ್ತವಾಗುವುದೆಂದು ನಂಬಿದ; ಆಧುನಿಕ ಮನುಷ್ಯನ ಕಾತರಗಳನ್ನು ಅತ್ಯಂತ ಪರಿಣಾಮಕಾರಿಯಾಗಿ ಹೇಳಿ ಫ್ರಾನ್ಸ್ ದೇಶವನ್ನು ಬೆಚ್ಚಿಬೀಳಿಸಿದ್ದ"[8] ಕಾವ್ಯದ ಪಾವಿತ್ರ್ಯತೆಯನ್ನು ಹೊಡೆದು ಹಾಕುವುದರ ಮೂಲಕ ಕ್ರಾಂತಿಕವಿ ಎನಿಸಿಕೊಂಡ ಇವನ ಕಾವ್ಯ, ಪರಂಪರೆಯನ್ನು ಪುನರ್ ವ್ಯಾಖ್ಯಾನ ಮಾಡುವುದಲ್ಲದೆ ಕಾರ್ಯ, ಕಾರಣ, ಸಂಬಂಧ ಪ್ರತಿಯೊಂದನ್ನು ಪರೀಕ್ಷಿಸುತ್ತದೆ. ಬೋದಿಲೇರ್‌ನ ಕಾವ್ಯ ಅಸ್ತಿತ್ವವಾದವನ್ನು ಹೇಳುತ್ತಲೇ, ಮನುಷ್ಯನ ಇರುವಿಕೆಯನ್ನು ಗುರುತಿಸಲು ಪ್ರಯತ್ನಿಸುತ್ತವೆ.

ಬೋದಿಲೇರ್‌ನ ಇಂತಹ ಕವನವನ್ನು ಲಂಕೇಶ್ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಭಿನ್ನ ಸಂಸ್ಕೃತಿಯಲ್ಲಿ ಮೈದಾಳಿದ ಕೃತಿಯನ್ನು ಇಲ್ಲಿನ ಸಂಸ್ಕೃತಿಯಲ್ಲಿ ಪುನರ್ ಸೃಷ್ಟಿ ಮಾಡಿದ್ದಾರೆ. ಇದುವರೆಗೂ ಸಂಸ್ಕೃತಿ ಎಂದು ನಂಬಲಾಗಿದ್ದನ್ನು ಕಾವ್ಯಗಳಲ್ಲಿ ಮೀರಲಾಯಿತು. ಅಂದರೆ ಮನುಷ್ಯ ತನ್ನ ಆಸೆ, ಆಮಿಷಗಳಿಗೆ ನೈತಿಕತೆಯ ಚೌಕಟ್ಟನ್ನು ಹಾಕಿಕೊಂಡು ತಮ್ಮ ಮೂಲಭೂತ ಪ್ರವೃತ್ತಿಗಳನ್ನು ಸಂಸ್ಕರಿಸಿಕೊಳ್ಳುವುದನ್ನೇ ಸಂಸ್ಕೃತಿ ಎಂದು ಅರ್ಥೈಸಲಾಗಿತ್ತು. ಆದರೆ ನಂತರದಲ್ಲಿ ಇದಕ್ಕೆ ವಿರುದ್ಧವಾಗಿ

ಸಂಸ್ಕೃತಿಯ ಗ್ರಹಿಕೆ ಬದಲಾಯಿತು. ಸಮಾಜದಲ್ಲಿನ ಬೂಟಾಟಿಕೆತನವನ್ನು ಎಡಬಿಡಂಗಿ ಸಂಸ್ಕೃತಿಯನ್ನು ಪ್ರಶ್ನೆ ಮಾಡಲಾಯಿತು. ಬೋದಿಲೇರ್‌ನಿಗೆ ಈ ಸಮಾಜದ ಮತ್ತೊಂದು ಮುಖ ತಿಳಿದಿದ್ದರಿಂದಲೇ ಆ ಮುಖವಾಡ ಕಳಚುವ ಪ್ರಯತ್ನವನ್ನು ಕಾವ್ಯಗಳ ಮೂಲಕ ಮಾಡಲು ಹೊರಟಿದ್ದು. ಆದ್ದರಿಂದಲೇ "ಜಡಗೊಂಡ ಓದುಗರನ್ನು ತನ್ನ ಅನುಭವದಿಂದ ಬೆಚ್ಚಿಬೀಳಿಸದೆ ಇರುವ ಲೇಖಕ ಎಂಥದನ್ನೂ ಮಾಡಲಾರ" ಎಂಬುದು ಬೋದಿಲೇರನ ನಂಬಿಕೆಯಾಗಿತ್ತು. ಆದರೆ ಈ ನಿಲುವೇ ಅವನಿಗೆ ಅಪಕೀರ್ತಿಯನ್ನು ತಂದದ್ದು ಬಹಳ ವಿಷಾದನೀಯ ಸಂಗತಿ. ಆದರೆ ಬೋದಿಲೇರನ ಈ ನಿಲುವುಗಳೇ ಲಂಕೇಶರನ್ನು ಆಕರ್ಷಿಸಿತು. ಅವರಿಗೆ ಆಪ್ತವಾಯಿತು ಎಂದರೆ ತಪ್ಪಾಗಲಾರದು. ಲಂಕೇಶ್ ಬೋದಿಲೇರನ ಕಾವ್ಯವನ್ನು ನರಕ ಎಂದು ಹೇಳುತ್ತಲೇ ಅದಕ್ಕೆ ಮತ್ತಷ್ಟು ಹತ್ತಿರವಾಗುತ್ತಾರೆ. ಲಂಕೇಶ್‌ರ ಕಾವ್ಯದಲ್ಲಿ ತೀವ್ರತೆ ಮತ್ತು ನೈತಿಕತೆಯನ್ನು ಒಟ್ಟಿಗೆ ಇಟ್ಟು ನೋಡುವ ದೃಷ್ಟಿಕೋನವೇ ಬೋದಿಲೇರನ 'ಪಾಪದ ಹೂವುಗಳು' ಕನ್ನಡೀಕರಿಸುವಂತೆ ಮಾಡಿತು.

ಬೋದಿಲೇರನ ಕಾವ್ಯದ ಮಹತ್ವ ಇರುವುದು ಅನುಭವದ ಹಿನ್ನೆಲೆಯಲ್ಲಿ. ಈತ ಮನುಷ್ಯನ ಅಸ್ತಿತ್ವದ ಬಗ್ಗೆ ಬಹಳ ಚಿಂತನೆ ನಡೆಸಿದವನು. 'ಓದುಗನಿಗೆ, 'ಶತ್ರು', 'ಏಕಾಂಗಿಯವ್ಯೆನ್', 'ಭಾವಚಿತ್ರ', 'ಅತ್ಯಂತ ಉಲ್ಲಾಸದ ಆಕೆಗೆ', 'ನಿವೇದನೆ', 'ಬೇಸರ', ಕಾವ್ಯದಲ್ಲಿ ಕಾಲವನ್ನು ತಿರಸ್ಕರಿಸುತ್ತಾ, ವ್ಯಕ್ತಿಯ ಇರುವಿಕೆಯನ್ನು ಗುರುತಿಸುತ್ತಾ ಆತನ ಮನಸ್ಸಿನ ವಿಕೃತಿ ಲಕ್ಷಣವನ್ನು ಹೇಳಲಾಗುತ್ತಿದೆ.

ಓದುಗನಿಗೆ ಕವನವನ್ನು ಓದುಗನಿಗೆ ಅಂಕಿತಗೊಳಿಸಿ ಮನುಷ್ಯನ ವಿಕೃತ ಲಕ್ಷಣವನ್ನು ಹೇಳಲಾಗಿದೆ. ಮನುಷ್ಯನ ಪಾಪ, ಮೂರ್ಖತನ, ಅಪರಾಧ, ಸಣ್ಣತನವನ್ನೆಲ್ಲಾ ಮಾಡಿ ತಾನು ಮಾಡಿದ ತಪ್ಪನ್ನೇ ನೆನಪು ಮಾಡಿಕೊಂಡು ತನ್ನ ಮನಸ್ಸಿನಲ್ಲಿರುವುದನ್ನು ತಾವೇ ತಿನ್ನುವುದನ್ನು ಹೇಳುತ್ತಾ ಮನುಷ್ಯನ ಸೊಗಲಾಡಿತನವನ್ನು ಹೊರಹಾಕುತ್ತಾರೆ. ಮನುಷ್ಯ ಪಾಪ ಮಾಡುವಾಗ ಗಟ್ಟಿಯಾಗಿರುತ್ತಾನೆ. ಆದರೆ ಆ ತಪ್ಪನ್ನು ಒಪ್ಪಿಕೊಳ್ಳಲು ಹಿಂಜರಿಯುತ್ತಾನೆ. ಅದರಿಂದ ಪಾರು ಆಗಲು ಕಣ್ಣೀರಿಗೆ ಜಾರಿ ತನ್ನ ಪಾಪದಿಂದ ತಪ್ಪಿಸಿಕೊಳ್ಳಬಹುದು ಎಂದು ನಂಬಿರುತ್ತಾನೆ. ಮನುಷ್ಯನ ಆಂತರಿಕ ಮನಸ್ಸನ್ನು ಗ್ರಹಿಸಿ ಅವನ ಒಳತೋಟಿಯನ್ನು ಹೊರತೆಗೆದ ಕವಿ ಬೋದಿಲೇರ್. ಸೈತಾನ ಪದವನ್ನು ಬಳಸುವುದರ ಮೂಲಕ ದೇವರ ಅಸ್ತಿತ್ವಕ್ಕೆ ಬಿಸಿನೀರು ಎರಚುತ್ತಾನೆ. ನಮ್ಮ ಅಸ್ವಸ್ಥಗೊಂಡ ಮನಸ್ಸನ್ನು (ಹಡಾಣೆ ಮನಸ್ಸನ್ನು) ಸಂತೈಸುವುದೇ ಈ ಸೈತಾನ್. ಹೀಗೆ ಮನುಷ್ಯನ ಆಸೆ ಮತ್ತು ದುರಾಸೆಗಳಿಗೆ ನಾಯಿ, ಕೋತಿಯನ್ನು ಉಪಮೆಯಾಗಿ ಬಳಸಿಕೊಂಡು ಓದುಗನ ಅನುಭವಕ್ಕೆ ಭಿನ್ನತೆಯನ್ನು ತಂದು ಕೊಡುತ್ತಾನೆ.

"ನೀನು ಅವನನ್ನು ಬಲ್ಲೆ ಓದುಗ– ಆ ಸೂಕ್ಷ್ಮ ಪ್ರಜ್ಞೆಯ ದೈತ್ಯನನ್ನು ನೀನು ಬಲ್ಲೇ ನೀನು ಕಪಟಿಯಾದ ಓದುಗ, ನನ್ನ ಪ್ರಜಾಬಾಂಧವ"[5]

ಮನುಷ್ಯನ ಆಂತರಿಕ ಮನಸ್ಸನ್ನು ಗ್ರಹಿಸಿ, ಮನುಷ್ಯನ ಸ್ವರೂಪವನ್ನು ಹೇಳುತ್ತಾ ನಮ್ಮ ಬದುಕನ್ನು ನರಕವನ್ನಾಗಿ ಮಾಡಿದವರು ನಾವೇ ಅದು ಬೇರೆ ಯಾರೂ ಅಲ್ಲ. ನೀನೇ ಓದುಗ ಎಂದು ಹೇಳುತ್ತಾ ಮನುಷ್ಯನ ವಿಕೃತ ಲಕ್ಷಣವನ್ನು ಹೇಳಲಾಗಿದೆ.

'ನಿವೇದನೆ' ಕವನದಲ್ಲಿ ಕೂಡ ರೂಪಸಿಯ ವ್ಯಕ್ತಿತ್ವವನ್ನು ಚಿತ್ರಿಸುವುದರ ಮೂಲಕ ಮನುಷ್ಯನ ವ್ಯಕ್ತಿತ್ವವನ್ನು ಚಿತ್ರಿಸಲಾಗಿದೆ.

"ರೂಪಸಿಯಾಗಿರುವ ಕೆಲಸ ಬೇಸರದ್ದು– ಹುಚ್ಚೆದ್ದು ನೆಲಕ್ಕೆ ಬೀಳುವವರೆಗೆ ಕುಣಿವ ಕಲ್ಲೆದೆಯ ನರ್ತಕಿ ತನ್ನ ತುಟಿಯ ಮೇಲೆ ಯಾಂತ್ರಿಕ ನಗೆ ಹೊತ್ತುಕೊಂಡಂತೆ".

**"ಮನುಷ್ಯ ಹೃದಯವನ್ನು ನಂಬಿ ಚಿರಂತನವಾದದ್ದು ಕಟ್ಟಲು**
**ಆಸೆ ಪಡುವುದು ಮೂರ್ಖತನ. ಎಲ್ಲ ಮುರಿದುಬೀಳುತ್ತದೆ. ಹೌದು**
**ಪ್ರೇಮ, ಸೌಂದರ್ಯ ಎಲ್ಲವೂ ವಿಸ್ಮೃತಿಯ ಆಳಕ್ಕೆ ಸರಿದು**
**ಹೋಗುತ್ತದೆ......"[6]**

ಈ ಕವನದ ಹೆಣ್ಣಿಗೆ ರೂಪಸಿಯ ಕೆಲಸ ಬೇಸರದ್ದು ಎದೆ ಕಲ್ಲಾದರೂ ತುಟಿಯ ಮೇಲೆ ನಗುವಿರಬೇಕು. ಅದು ಯಾಂತ್ರಿಕ ನಗು. ಮನುಷ್ಯ ತನ್ನ ಜೀವನದಲ್ಲಿ ಏನೆಲ್ಲವನ್ನು ಸಾಧಿಸಲು (ಕಟ್ಟಲು) ಆಸೆ ಪಡುತ್ತಾನೋ ಅವೆಲ್ಲವೂ ಭಗ್ನವಾದದ್ದು. ಅದು ಅವನ ಮೂರ್ಖತನವಾಗಿದೆ.

**"ಅವನನ್ನು ಎಂಥದೂ ಖುಷಿಗೊಳಿಸಲಾರದು, ಬೇಟೆ ಅಥವಾ**
**ಬೇಟ. ಅವನಿಗಾಗಿ ಸಾಯಬಲ್ಲ ಪ್ರಜೆಗಳಿದ್ದಾರೆ. ಅವನ**
**ಮೊಗಸಾಲೆಯಡಿ; ಅವರಿಂದ ಉಪಯೋಗವಿಲ್ಲ; ಅವನ**
**ನಕಲಿಶಾಮನ ಪ್ರಚಂಡ ಹಾಸ್ಯ ಚಟಾಕಿಗಳು ಕೂಡ ಅವನ ಹುಬ್ಬಿನ**
**ಗಂಟು ಸಡಿಸಲಾರವು. ಹೂವಿನಿಂದ ಅಲಂಕೃತ ಪೀಠ ಅವನ**
**ಹೆಣಮನೆಯಾಗಿದೆ. ಎಲ್ಲ ರಾಜರನ್ನೂ ತಣಿಸಬಲ್ಲ ಅಂತಃಪುರದ**
**ಕಾಮಿನಿಯರು ಎಂಥ ವೈಯಾರದಿಂದಲೂ ಅವನ ತರುಣ**
**ಅಸ್ಥಿಪಂಜರದಿಂದ ಒಂದು ನಗೆ ಮುಗುಳು ಹೊರಡಿಸಲಾರರು"[7]**

'ಬೇಸರ' ಕವಿತೆಯಲ್ಲಿ ಬೇಸರ ಪದವನ್ನು ಒಂದು ರೂಪಕವಾಗಿ ಬಳಸಿಕೊಳ್ಳಲಾಗಿದೆ. ರಾಜನ ಮುಖದ ಚಹರೆಯೂ ಅವನ ಮನಸ್ಥಿತಿಯನ್ನು, ನಿಸ್ತೇಜನಗೊಂಡ ಬದುಕನ್ನು ಕವಿತೆ ಚಿತ್ರಿಸುತ್ತದೆ. ಈ ರಾಜನಿಗೆ ಯಾವುದರಲ್ಲೂ ಖುಷಿಯಿಲ್ಲ. ಬೇಟೆ, ಪ್ರೀತಿ (ಬೇಟ), ನಕಲಿಶಾಮನಾದ ವಿದೂಷಕನ ಹಾಸ್ಯಚಟಾಕಿ

ಯಾವುದರಲ್ಲಿಯೂ ಆಸಕ್ತಿಯಿಲ್ಲ. ತನ್ನ ಬದುಕನ್ನೇ ತಿರಸ್ಕರಿಸುತ್ತಾನೆ. ಹೀಗೆ ಬೇಸರದ ಸಂಗತಿಯಲ್ಲಿ ಮನುಷ್ಯ ನಾಶವಾಗುವ ಸ್ಥಿತಿಯನ್ನು ಕವಿತೆ ಹೇಳುತ್ತದೆ.

ಮನರಂಜನೆಯನ್ನು ಬಯಸುವ ಮನುಷ್ಯ ವಿವಿಧ ಮೋಜಿನ ಬಗೆಗಳನ್ನು ಏಕಾಂಗಿಯ ವೈನ್ ಕವಿತೆ ಹೇಳುತ್ತದೆ. ಆದರೆ ಸಂಗೀತ, ಜೂಜು ಇವೆಲ್ಲ ಕ್ಷಣಿಕ ಯಾವುದು ಉಲ್ಲಾಸ ನೀಡುವುದಿಲ್ಲ ಎಂದು ಕವಿತೆ ಹೇಳುತ್ತದೆ. 'ಸದಾ ಕುಡಿದಿರು' ಕವಿತೆ, ಸದಾ ಕುಡಿದಿರು ಎಂದು ಹೇಳುತ್ತಲೇ, ಕುಡಿತದ ಕಲ್ಪನೆಯನ್ನು ನಿರಾಕರಿಸುವ ಧ್ವನಿಯಿದೆ. ಜಡಗೊಂಡ ಸಮಾಜಕ್ಕೆ ಚೈತನ್ಯ ತುಂಬುವ ಹಂಬಲವಿದೆ.

**"ಮನುಷ್ಯ ಸದಾ ಕುಡಿದ ಸ್ಥಿತಿಯಲ್ಲಿರಬೇಕು**
**ಏನನ್ನು ಕುಡಿಯುವುದು?**
**ವೈನ್, ಕಾವ್ಯ, ಋಜುತ್ವ**
**ಯಾವುದನ್ನಾದರೂ;**
**ಕುಡಿಯಬೇಕು ಮಾತ್ರ"**[೬]

ಹೀಗೆ ಬೋದಿಲೇರ್ 'ಬೇಸರ', 'ಓದುಗನಿಗೆ,' 'ನಿವೇದನೆ', 'ಏಕಾಂಗಿಯ ವೈನ್', 'ಸದಾ ಕುಡಿದಿರು', ಕವಿತೆಗಳಲ್ಲಿ ಮನುಷ್ಯನ ಇರುವಿಕೆಯನ್ನು ಗುರುತಿಸಲು ಪ್ರಯತ್ನಿಸಿದ್ದಾನೆ.

'ಶತ್ರು' ಕವನದಲ್ಲಿ ಜೀವನ(ಯೌವನ)ವನ್ನು ಚಂಡಮಾರುತಕ್ಕೆ ಹೋಲಿಸಿ, ಬದುಕನ್ನು ನೋಡುವ ಕ್ರಮವಿದೆ. 'ಚಂಡಮಾರುತದಂತೆ ಇರುವ ಮನುಷ್ಯನ ಜೀವನ ಆಗೊಮ್ಮೆ ಈಗೊಮ್ಮೆ ಸೂರ್ಯನ ಕಿರಣ ಬೀರುತ್ತದೆ. ಇನ್ನೊಂದೆಡೆ ಅವನ ತೋಟಕ್ಕೆ ಸಿಡಿಲಿನ ಹೊಡೆತದಿಂದ ಹಣ್ಣುಗಳು ಉದುರಿವೆ ಎಲ್ಲೋ ಕೆಲವನ್ನು ಬಿಟ್ಟು; ಒಂದು ಕಡೆ ಸಂತೋಷ ಮತ್ತೊಂದು ಕಡೆ ದುಃಖ ಇವೆರಡರ ದ್ವಂದ್ವವನ್ನು ಕವಿತೆ ಹೇಳುತ್ತದೆ.

**"ಮನಸ್ಸಿನ ಶರದೃತುವನ್ನು ತಲುಪಿದ ನಾನು ಗುದ್ದಲಿ**
**ಪಿಕಾಸಿ ಹಿಡಿದು ಬೆವರು ಸುರಿಸಿ ಪಾಳು ನೆಲಗೇಯ**
**ಬೇಕು– ನನ್ನ ಸಮಾಧಿಯಷ್ಟು ಆಳದ ಗುಂಡಿ ಮುಚ್ಚಿ;**
**ಯಾರಿಗೆ ಗೊತ್ತು ಈ ಮನಸ್ಸಿನಲ್ಲಿ ಸಮುದ್ರದ ತಡಿ**
**ಯಂತೆ ಮಳೆ ಮತ್ತು ಪ್ರವಾಹದಿಂದ ತೊಳೆದು ಹೋದ**
**ಈ ಮನಸ್ಸಿನಲ್ಲಿ ಹೂವುಗಳು ಅರಳುವವೋ ಇಲ್ಲವೋ**
**ಆಧ್ಯಾತ್ಮಸುಧೆ ದೊರಕೀತೋ ಇಲ್ಲವೋ – ಯಾರು**
**ಬಲ್ಲವರು"**[೭]

ಮನುಷ್ಯನ ಇರುವಿಕೆಯನ್ನು ತನ್ನ ಅಸ್ತಿತ್ವದ ಯೋಚನೆಯಲ್ಲಿ ಇರುವ ಸಂದಿಗ್ಧತೆ, ಗೊಂದಲ, ತೊಂದರೆಗಳನ್ನು ಹೇಗೆ ನಿರೂಪಿಸಲು ಸಾಧ್ಯ ಎಂಬುದನ್ನು ಬೋದಿಲೇರ್ ಕಾವ್ಯದಲ್ಲಿ ನಿರೂಪಿಸಿದ್ದಾನೆ. ಕಾಲವನ್ನು ಶತ್ರುವಿಗೆ ಹೋಲಿಸುತ್ತಾ ಒಂದು ಇನ್ನೊಂದನ್ನು ಕಬಳಿಸುತ್ತದೆ. ಕಾಲ ಜೀವವನ್ನು ತಿನ್ನುತ್ತಾನೆ. ಕಣ್ಣಿಗೆ ಕಾಣದ ಶತ್ರು ಕಾಲನೇ. ಕಾಲನನ್ನು 'ಭಾವಚಿತ್ರ' ಕವಿತೆಯಲ್ಲಿಯೂ ಶತ್ರುವಿನ ರೀತಿಯಲ್ಲಿ ನೋಡಲಾಗಿದೆ. ಕವಿತೆ ಆರಂಭದ ಸಾಲುಗಳು ಹೀಗಿದೆ, 'ನಮ್ಮ ರೋಗ ಮತ್ತು ಸಾವು ನಮ್ಮಲ್ಲಿ ಉರಿವ ಎಲ್ಲ ಬೆಂಕಿಗಳನ್ನು ಬೂದಿಯಾಗಿಸುತ್ತವೆ; ಈ ಸಾಲು ಅನುಭವದ ವಾಕ್ಯವೆಂದೇ ಹೇಳಬಹುದು. ಅಂದರೆ ಯಾತನ ಜಗತ್ತು ಮನುಷ್ಯನನ್ನು ಬೂದಿಯಾಗಿಸುತ್ತದೆ, ನಾಶಗೊಳಿಸುತ್ತದೆ. ಕವಿಯ ಅನುಭವವನ್ನು ಸದಾ ಕಾಡುವುದು ರೋಗ ಮತ್ತು ಸಾವು. ಆದರೆ ರೋಗ ಬೋದಿಲೇರನ ಜೀವನದಲ್ಲಿ ಕ್ರಿಯಾ ಚೈತನ್ಯವನ್ನು ಮೂಡಿಸುತ್ತದೆ.

> **"ಉಳಿಯುವುದೇನು? ಹೇಳಲು ವಿಷಾದವಾಗುತ್ತದೆ. ಓ ನನ್ನ**
> **ಚೇತನವೇ ನನ್ನಂತೆ ಕೇಳುವವರಿಲ್ಲದೆ ಸಾಯುತ್ತ ಬಿದ್ದ, ಆ ಬಿಳಿಗಡ್ಡದ**
> **ಕಾಲಪುರುಷ ತನ್ನ ರೆಕ್ಕೆಗಳಿಂದ ನಿತ್ಯ ತೀಡಿಹಾಕುವ ಮಾಸಿದ ಮೂರು**
> **ಬಣ್ಣಗಳ ಚಿತ್ರ ಮಾತ್ರ ಉಳಿಯುತ್ತದೆ. ಬದುಕು ಮತ್ತು ಕಲೆಯನ್ನು**
> **ಕೊಲ್ಲುವ ಕಡುಕೊಲೆಗಾರ, ಕಾಲನೇ, ನನ್ನ ಸುಖ-ಸಂಪತ್ತಿನಂಥ**
> **ಅವಳ ನೆನಪನ್ನು ಮಾತ್ರ ನೀನು ಸಾಯಿಸಲಾರೆ"**[೮]

ಇಲ್ಲಿ ಕಾಲವನ್ನು ಮುಪ್ಪಿಗೆ ಹೋಲಿಸಲಾಗಿದೆ. ಆತ ಬಿಳಿಗಡ್ಡದ ಕಾಲಪುರುಷ. ಆತನಲ್ಲಿ ಕಾಣುವುದು ಮೂರು ಬಣ್ಣದ ಚಿತ್ರಗಳು. ಅದು ಬದುಕು, ಕಲೆ, ಕೊಲೆಗಾರ. ಬದುಕು ಮತ್ತು ಕಲೆಯನ್ನು ಕೊಲ್ಲುವ ಕೊಲೆಗಾರ ಕಾಲನೇ ಹೊರತು ಬೇರಾರು ಅಲ್ಲ ಎಂದು ಕಾಲವನ್ನು ಶಪಿಸಲಾಗುತ್ತಿದೆ. ಒಂದು ರೀತಿಯ ವಿಷಾದವಿದೆ.

ಸೃಜನಶೀಲತೆ ಮನುಷ್ಯ ಮನಸ್ಸಿನ ಒಂದು ರೂಪ. ಅದರಲ್ಲಿ ವಿಕೃತಿಯೂ ಒಂದು. ಬೋದಿಲೇರ್ ಕಾವ್ಯ ಮನುಷ್ಯನ ವಿಕೃತಿಯನ್ನು ಹೇಳುವಂಥದ್ದು. ಅವನ ಕಾವ್ಯದ ಕೇಂದ್ರ ಬಿಂದು ಹೆಣ್ಣು; ಹೆಣ್ಣನ್ನು ಕಾಮದ ಬೊಂಬೆಯಾಗಿ ನೋಡುತ್ತಾನೆ. ಪ್ರೀತಿಯನ್ನು ವಿಚಿತ್ರವಾಗಿ ನೋಡುತ್ತಾನೆ. ಒಂದು ರೀತಿ ಬೋದಿಲೇರ್‌ನ ಅನುಭವದ ಲೋಕ ಬಹಳ ವಿಚಿತ್ರವಾದದ್ದು. ವಿಕೃತಿಯಿಂದ ಕೂಡಿರುವಂತಹದ್ದು. ಇದಕ್ಕೆ 'ಅತ್ಯಂತ ಉಲ್ಲಾಸದ ಆಕೆಗೆ' ಕವಿತೆಯೇ ನಿದರ್ಶನವಾಗಿದೆ. 'ಜಗತ್ತು ಇರುವ ಕಡೆ ಚಲಿಸದೇ ಅದರ ವಿರುದ್ಧವಾದ ಜಗತ್ತನ್ನು ಸಂಧಿಸುವ ಪ್ರಯತ್ನವಿದೆ. ಇನ್ನು ಪ್ರೇಮದ ವ್ಯಾಖ್ಯಾನವನ್ನು 'ಸುಗಂಧದ್ರವ್ಯ' ಕವನದಲ್ಲಿ ವ್ಯಾಖ್ಯಾನಿಸಲಾಗಿದೆ. 'ಸುಗಂಧದ್ರವ್ಯ' ಗಂಡು - ಹೆಣ್ಣಿನ ಸಂಬಂಧವನ್ನು ಹೇಳುತ್ತಿದೆ. ಕವಿತೆ ಮೂಗಿನ ಗ್ರಹಣ ಶಕ್ತಿಯಿಂದ ಪ್ರೀತಿಯ ವ್ಯಾಖ್ಯಾನವನ್ನು

ಮಾಡುತ್ತಿದೆ. ಪ್ರೀತಿಸುವ ಮಾತಿನಲ್ಲಿರುವ ವಕ್ರತೆಯನ್ನು, ಬೂಟಾಟಿಕೆಯನ್ನು 'ದುಃಖದ ಪದ' ಕವಿತೆ ಹೇಳುತ್ತಿದೆ. "ಬದುಕು ನೀವು ಬಯಸುವ ಸ್ವರ್ಗವಲ್ಲ, ಅದು ಅನುಭವಿಸುವ ನರಕ" ಇಲ್ಲಿ ಪ್ರೀತಿಯು ಮುಕ್ತವಾದ, ಮುಗ್ಧವಾದ ಮನಸ್ಸನ್ನು ಶೋಧಿಸುವುದಾಗಿದೆ.

ಬೋದಿಲೇರ್ ತನ್ನ ಕಾವ್ಯದಲ್ಲಿ ರತಿಕ್ರೀಡೆಯನ್ನು ಎಲ್ಲೂ ವಿವರಿಸಿಲ್ಲ. ಆದರೆ ಹೆಂಗಸರನ್ನು ವರ್ಣಿಸಿದ್ದಾನೆ. ಅವರ ಆಕರ್ಷಣೆಯ ಬಗ್ಗೆ ಬರೀತಾನೆ. ಅವರ ವಿಲಕ್ಷಣವಾದ ರೀತಿನೀತಿಗಳ ಬಗ್ಗೆ ಬರೀತಾನೆ. ಅವರ ನಡಿಗೆಯ ಬಗ್ಗೆ ಬರೀತಾನೆ. ಅವರ ಅಂಗಾಂಗಗಳ ಬಗ್ಗೆ ಬರೀತಾನೆ. ಹೀಗೆಲ್ಲ ಬರಿಯುವಾಗಲೂ ಕೂಡ ಕಾಮ ಮತ್ತು ಸಾವು ಇವುಗಳ ಬಗೆಗಿನ ಅರಿವು ತನ್ನ ಇರುವಿಕೆಯ ಭಾಗ ಆಗುವ ಪ್ರಯತ್ನದ ಹಾದಿಯಲ್ಲಿ ಬೋದಿಲೇರ್ ತನ್ನ ಕಾವ್ಯ ಸೃಷ್ಟಿಸುತ್ತಾನೆ.

**"ನಿನ್ನ ಕೂದಲ ಮಹಾಸಾಗರದಲ್ಲಿ ನಾನು ನೋಡುವ ಬಂದರಿನಲ್ಲಿ**
**ಕಡಲ ಹಾಡುಗಳಿವೆ, ಬಲಿಷ್ಠ ವೈವಿಧ್ಯಮಯ ಗಂಡಸರಿದ್ದಾರೆ, ನಾನಾ**
**ಬಣ್ಣ, ರಚನೆಗಳ ಹಡಗುಗಳಿವೆ; ಮಹಾ ಆಕಾಶದ ತೀಕ್ಷ್ಣ ಶಾಖ**
**ಅಲ್ಲಿದೆ. ನಿನ್ನ ಕೂದಲಲ್ಲಿ ನಾನು ಹಡಗಿನ ಪೀಠಗಳಲ್ಲಿ ಕೂತು ಕಳೆದ**
**ಭಾರದ ನಿಮಿಷಗಳನ್ನು ಕಾಣುತ್ತೇನೆ. ಹಾಗೆ ಹೀಗೆ ಅಲೆಗಳಲ್ಲಿ**
**ಒನೆದಾಡುವ ಹಡಗಿನಲ್ಲಿ ಹೂಕುಂಡಗಳನ್ನು, ಮದ್ಯ ಕರಂಡಗಳನ್ನು**
**ಕಾಣುತ್ತೇನೆ"**

ಇಲ್ಲಿ ಹೆಣ್ಣಿನ ಅಂಗಾಂಗದ ವರ್ಣನೆಯನ್ನು ಕಾಣಬಹುದು. ಈ ಸಾಲುಗಳನ್ನು ಓದುತ್ತಿದ್ದರೆ, ಒಂದು ಕ್ಷಣ ಪಂಪ, ರನ್ನರ ದ್ರೌಪದಿಯ ವರ್ಣನೆ ನೆನಪಿಗೆ ಬರುತ್ತದೆ. 'ಹೆಣ್ಣಿನ ಕೂದಲಲ್ಲಿ ಭೂಮಿಯ ಅರ್ಧಭಾಗ' ಶೀರ್ಷಿಕೆಯೇ ಧರಣೀನಾರಿಯ ಕಲ್ಪನೆಯನ್ನು ಕೊಡುತ್ತಿದೆ. ಮತ್ತೊಂದು ಕವನದಲ್ಲಿ ಹೆಣ್ಣನ್ನು ಬೆಕ್ಕಿಗೆ ಹೋಲಿಸಿ ನೋಡಲಾಗಿದೆ. ಬೆಕ್ಕನ್ನು ಮಾರ್ಜಾಲ ಎಂತಲೂ ಕರೆಯುತ್ತಾರೆ. ಇಂತಹ ಬೆಕ್ಕಿನ ಮೂಲಕ ಪ್ರೀತಿಸಿದ ಹೆಣ್ಣನ್ನು ಚಿತ್ರಿಸಲಾಗಿದೆ.

ಹೀಗೆ ವ್ಯಕ್ತಿಯ ಇರುವಿಕೆ, ಕಾಲವನ್ನು ಅರ್ಥೈಸಿಕೊಳ್ಳುವ ಕ್ರಮ, ಹೆಣ್ಣಿನ ವರ್ಣನೆಯನ್ನು ಬೋದಿಲೇರ್ ಕಾವ್ಯ ಬಿಚ್ಚಿಡುತ್ತದೆ. ಲಂಕೇಶ್ ಬೋದಿಲೇರ್‌ನೇ ಏಕೆ ಅನುವಾದ ಮಾಡಬೇಕಿತ್ತು. ಶೇಕ್ಸ್‌ಪಿಯರ್‌ನನ್ನು ಅನುವಾದ ಮಾಡಬಹುದಿತ್ತಲ್ಲ ಎನ್ನುವ ಪ್ರಶ್ನೆಯನ್ನು ಹಾಕಿಕೊಳ್ಳುತ್ತಾ ಜಿ.ಕೆ.ಗೋವಿಂದರಾವ್‌ರವರು ಲಂಕೇಶ್ ಬೋದಿಲೇರ್‌ನ ಕಾವ್ಯ ಅನುವಾದ ಮಾಡಿದ್ದರ ಬಗ್ಗೆ ಬೋದಿಲೇರ ವ್ಯಕ್ತಿತ್ವದ ಬಗ್ಗೆ ಹೀಗೆ ಹೇಳುತ್ತಾರೆ. "ಲಂಕೇಶ್ ಬೋದಿಲೇರಿಗೆ ಯಾಕೆ ಹೋದರು. ಭಗವದ್ಗೀತೆಗೆ ಹೋಗಬಹುದಿತ್ತಲ್ಲ! ಅಥವಾ ಶೇಕ್ಸ್‌ಪಿಯರ್‌ಗೆ ಹೋಗಬಹುದಿತ್ತು. ಬೋದಿಲೇರನ ವ್ಯಕ್ತಿತ್ವ ಮತ್ತು ಅವನ ಜೀವನ ಮತ್ತು ಅವನ ಬರಹ ಲಂಕೇಶ್‌ರಿಗೆ ಪ್ರಿಯವಾಗಿತ್ತು. ಬೋದಿಲೇರ್ ಒಬ್ಬ

anarchist. ಅವನ ಬಂಡಾಯ ಯಾವ System ವಿರುದ್ಧನೂ ಅಲ್ಲ. ಅದು ಬದುಕಿನ ರೀತಿಯ ವಿರುದ್ಧವೇ ನಡೆದ ಬಂಡಾಯ. ನಾವು ಮಾಡಿಕೊಂಡಿರುವಂತಹ ನಡಾವಳಿಗಳು. ಸಾಮಾಜಿಕ, ಸಾಹಿತ್ಯಕ, ರಾಜಕೀಯ, ಧಾರ್ಮಿಕ ನಡಾವಳಿಗಳು ಎಲ್ಲದರ ವಿರುದ್ಧ ಯಾವತ್ತೂ ಉದ್ವಿಗ್ನ ಸ್ಥಿತಿಯಲ್ಲಿ, ಖಿನ್ನ ಸ್ಥಿತಿಯಲ್ಲಿ ರೋಷದ ಸ್ಥಿತಿಯಲ್ಲಿ ಸಿಡಿಮಿಡಿಯಾಗಿ ಬದುಕಿದ ಬೋದಿಲೇರ್‌ನ ಈ ಮನಸ್ಥಿತಿಯ ಹಿಂದೆ ಒಂದು ಅದ್ಭುತ್ವಾಎಲ್ಲ ಬಗೆಯ ಸೌಂದರ್ಯಕ್ಕೆ ಸ್ಪಂದಿಸುವ ಶಕ್ತಿ ಇರದಿದ್ದರೆ ಪ್ರಾಯಶಃ ಅವನು ಕುಸಿದು ಹೋಗಿಬಿಡುತ್ತಿದ್ದ. ಬೋದಿಲೇರ್‌ನನ್ನುSave ಮಾಡಿದ್ದು ಈ Profound sense of beauty. ಅವನ ಇಡೀ ಜೀವನದಲ್ಲಿ ಅವನು ಹೋರಾಟ ಮಾಡುತ್ತಿದ್ದದ್ದು ತಾನು ಹೊರಗೆ ಕಾಣತಕ್ಕಂತಹ ಎಲ್ಲ ವೈರುಧ್ಯಗಳಿಗೂ ಮತ್ತು ತಾನು ಒಳಗೆ ಕಾಣುತ್ತಿರುವಂತಹ ತನ್ನ ಅಂತರ್‌ದೃಷ್ಟಿಗೆ ಕಾಣುವ ಈ ಸೌಂದರ್ಯಕ್ಕೂ ಹೇಗೆ ಮೇಳೈಸುವುದು ಎನ್ನುವುದರ ಬಗ್ಗೆ"[೧೦]

ಬೋದಿಲೇರ್ ತನ್ನ ಬದುಕಿನ ವಿರುದ್ಧವೇ ಬಂಡೆದ್ದ ನಿಜ, ಆದರೆ ತನ್ನ ಸ್ವಂತಿಕೆಯನ್ನು ಮೀರಿ ಅವನು ಇಡೀ ಸಮಾಜದ ವಿರುದ್ಧವೂ ದಂಗೆ ಎದ್ದಿದ್ದಾನೆ. ಸಮಾಜ ರೂಪಿಸಿದ ಸಿದ್ಧಮಾದರಿಯನ್ನು ಹೊಡೆದು ಹಾಕಿದ್ದಾನೆ. ಬೋದಿಲೇರ್‌ನ ಕಾವ್ಯ ವೈಯಕ್ತಿಕತೆಯನ್ನು ಮೀರಿ ಸಾರ್ವಜನಿಕವಾಗಿದೆ ಎನ್ನಬಹುದು. ಲಂಕೇಶರ ಅವ್ವ ಕವಿತೆ ಕೂಡ ಸ್ವಂತಿಕೆಯನ್ನು ಮೀರಿ ಸಾರ್ವಜನಿಕವಾಗಿದೆ. ಅದು ಒಬ್ಬ ಕವಿಯ ಸೃಜನಶೀಲತೆಯನ್ನು ಹೇಳುತ್ತದೆ. ಒಂದು ಶ್ರೇಷ್ಠ ಕೃತಿ ಯಾವಾಗಲೂ ವೈಯಕ್ತಿಕತೆಯನ್ನು, ಕಾಲದೇಶವನ್ನೂ ಮೀರಿ ಪ್ರಸ್ತುತವಾಗುತ್ತದೆ. ಅಂತಹ ಶ್ರೇಷ್ಠ ಸಾಹಿತ್ಯಗಳಲ್ಲಿ ಲಂಕೇಶರ ಅವ್ವ ಕವಿತೆ ಹಾಗೂ ಬೋದಿಲೇರನ ಕಾವ್ಯವೂ ಸೇರುತ್ತದೆ.

ಬೋದಿಲೇರನ ಪ್ರಭಾವವನ್ನು ಲಂಕೇಶರ 'ಗೋಡೆಯ ಜನ', 'ನನ್ನ ಸುತ್ತಾ' ಕವಿತೆಯಲ್ಲಿ ಕಾಣಬಹುದು. ಈ ಕವಿತೆಯ ಆಶಯವು ಜಡಗೊಂಡ ಓದುಗರನ್ನು ತನ್ನ ಅನುಭವದಿಂದ ಬೆಚ್ಚಿ ಬೀಳಿಸದೆ ಇರುವ ಲೇಖಕ ಎಂಥದನ್ನೂ ಮಾಡಲಾರ ಎಂಬ ಬೋದಿಲೇರನ ನಂಬಿಕೆಯನ್ನೇ ಆಧರಿಸಿ ಮೂಡಿಬಂದಿದೆ ಎಂದೆನಿಸುತ್ತದೆ. ಗೋಡೆಯ ಜನ ಕವಿತೆಯಲ್ಲಿ ಸಮಾಜವನ್ನು ತಿರಸ್ಕರಿಸುತ್ತಲೇ ಜಾತಿ, ಧರ್ಮವನ್ನು ತಿರಸ್ಕರಿಸುತ್ತಾ ದೇವರ ಕಲ್ಪನೆಯನ್ನೇ ಅಲ್ಲಗಳೆಯುತ್ತಾರೆ. ಬೋದಿಲೇರ್ ಮಾಡಿದ್ದು ಇದನ್ನೇ ಆತ ದೇವರ ಕಲ್ಪನೆಯಯನ್ನೇ ತಿರಸ್ಕರಿಸಿ ಸೈತಾನ್‌ನನ್ನು ಪ್ರಾರ್ಥಿಸುತ್ತಾನೆ.

'ನನ್ನ ಸುತ್ತಾ' ಕವನದಲ್ಲೂ ಮನುಷ್ಯನ ಬೂಟಾಟಿಕೆ ವ್ಯಕ್ತಿತ್ವವನ್ನು, ಗೊಡ್ಡು ಸಂಪ್ರದಾಯವನ್ನು, ಯಾಂತ್ರಿಕ ಜಗತ್ತನ್ನು, ಸಮಾಜದ ಮತ್ತೊಂದು ಮುಖವನ್ನು, ಸೂತ್ರವೇ ಇಲ್ಲದ ಆಡಳಿತವನ್ನು ತಿರಸ್ಕರಿಸುತ್ತಾ ಮನುಷ್ಯನ ಇರುವಿಕೆಯನ್ನು ಹುಡುಕುವ ಪ್ರಯತ್ನವಿದೆ.

ಲಂಕೇಶ್ ಬೋದಿಲೇರನ ಕವನವನ್ನು ಅನುವಾದ ಮಾಡಿದಷ್ಟೇ ಅಲ್ಲದೆ ನೆರೂಡಾ, ಎಜ್ರಾಪೌಂಡ್ ಕವನವನ್ನು ಅನುವಾದ ಮಾಡಿದ್ದಾರೆ. 'ನೆರೂಡ' ದಕ್ಷಿಣ ಅಮೇರಿಕಾದ ಚಿಲಿ ದೇಶದ

ಕವಿ. ಲಂಕೇಶ್ ಹೇಳುವಂತೆ ಸಾವಿನ ಅಂಚಿನಲ್ಲಿದ್ದ ನೆರೂಡ ಸುಮಾರು ನಾಲ್ಕು ವರ್ಷ ತನ್ನ ಕೊನೆಯ ದೀರ್ಘ ಕವನ "ಮತ್ತೊಂದು ದಿನ"ವನ್ನು ರಚಿಸಿದ. ಈ ದೀರ್ಘ ಕವನದಲ್ಲಿ ಬರುವ "ಬಂಡೆಯಂತೆ" ಕವನವನ್ನು ಗಮನಿಸಿದರೆ, ಬಂಡೆ ಹೆಸರೇ ಹೇಳುತ್ತಿದೆ. ಜಡ, ಎಲ್ಲವೂ ನಿಸ್ತೇಜನ. ಕ್ರಿಯೆ ಇಲ್ಲದ ಸ್ಥಿತಿ. ದಿನ ಕಳೆಯುತ್ತಿದೆ ಅದು ಹೇಗೆ? ನಚ್ಚಗೆ ಉರಿಯುತ್ತಿದೆ. ಆದರೆ ಯಾವುದೇ ಕ್ರಿಯೆ ನಡೆಯುತ್ತಿಲ್ಲ.

**"ದಿನಗಳನ್ನು ಉದುರಿಸಲಾಗುವುದಿಲ್ಲ, ಸಂಗ್ರಹಿಸಲಾಗುವುದಿಲ್ಲ**
**ಅವು ನಚ್ಚಗೆ ಉರಿಯುತ್ತವೆ, ಅಥವಾ**
**ನೋವನ್ನು ತೀವ್ರಗೊಳಿಸುತ್ತವೆ; ಹೋರಾಟ ಮುಗಿಯುತ್ತದೆ**
**ಪ್ರಯಾಣ ಬರುವುದು ಹೋಗುವುದರೊಂದಿಗೆ**
**ಮುಗಿಯುತ್ತದೆ"**[??]

------------------------------

------------------------------

**"ಸೇವೆ ಸಲ್ಲಿಸಲು ಬಂದು ಆಕಳಿಸುವ**
**ಗ್ರಾಮ ಸೇವಕ**
**ಬರದ ಮಳೆ**
**ಬೆಳೆಯದ ಬೆಳೆ**
**ಎಲ್ಲೋ ಮೂಲೆಯಲ್ಲಿ ಮೂಡುತ್ತಿದೆ ಕ್ರಾಂತಿ**
**ಎಂಬ ಭ್ರಾಂತಿ"**[??]

ಲಂಕೇಶರ ಸ್ವರಚನೆಯ 'ತಲೆಮಾರು', 'ನನ್ನಸುತ್ತ' ಕವನ ಸಮಾಜದ ಮನುಷ್ಯನ ಜಡತ್ವವನ್ನು ಚಲನೆಯೇ ಇಲ್ಲದ ಸ್ಥಿತಿಯನ್ನು ಹೇಳಿದರೆ, ನೆರೂಡರ ಬಂಡೆಯಂತೆ ಕವನವು ಚೈತನ್ಯವೇ ಇಲ್ಲದ ಬದುಕನ್ನು ಚಿತ್ರಿಸುತ್ತದೆ.

ಬೋದಿಲೇರ್ ಏಕೆ ಲಂಕೇಶರಿಗೆ ಆಪ್ತರಾಗುತ್ತಾರೆ ಎನ್ನುವ ಪ್ರಶ್ನೆ ಸಾಮಾನ್ಯವಾಗಿ ಎದುರಾಗುತ್ತದೆ. ಇದಕ್ಕೆ ಕಾರಣವನ್ನು ಹುಡುಕ ಹೊರಟರೆ ಅದಕ್ಕೆ ಬೋದಿಲೇರನ ನಂಬಿಕೆ ಕಾರಣವಿರಬಹುದು. ಜಡಗೊಂಡ ಓದುಗರಿಗೆ ತನ್ನ ಅನುಭವದಿಂದ ಬೆಚ್ಚಿಬೀಳಿಸದೆ ಇರುವ ಲೇಖಕ ಎಂಥವನ್ನೂ ಮಾಡಲಾರ ಎಂಬುದು. ಈ ರೀತಿಯ ನಂಬಿಕೆ ಲಂಕೇಶರ ನೀಲು ಕಾವ್ಯದ ಹುಟ್ಟಿಗೆ ಕಾರಣವೂ ಇದ್ದಿರಬಹುದು. ನೀಲು ಕಾವ್ಯವು ಅನುಭವಗಳ ಆಘಾತದಂತೆ ಮೂಡಿಬಂದಿದೆ. ತನ್ನ

ಅನುಭವವನ್ನು ಕಣ್ಣಿಗೆ ಕಟ್ಟುವ ರೀತಿಯಲ್ಲಿ ಮುಕ್ತವಾದ ಭಾಷೆಯ ಮೂಲಕ ಜಡಗೊಂಡ ಓದುಗರಿಗೆ ಲಂಕೇಶ್ ಅಚ್ಚರಿ ಮೂಡಿಸಿದ್ದಾರೆ.

"ತೋಯ್ದ ರೇಷ್ಮೆ ರವಿಕೆಯನ್ನು ಗಂಡಾಗಿಸುವ ನಿನ್ನ ಮೊಲೆ,
ವಿಜಯೋನ್ಮಾದದ ನಿನ್ನ ಮೊಲೆ ಭ್ರಮಣಗೊಂಡ ಬೆಳಕೆಸೆವ
ಗುರಾಣಿಯನ್ನು ಹೋಲುವ ಗಾಣದಂತಿವೆ. ಚೇತೋಹಾರಿಯಾದ
ಗುರಾಣಿಗೆ ಗುಲಾಬಿ ಬಣ್ಣದ ತೊಟ್ಟು, ಸುಖ ಕೊಡುವ
ಸಂತೋಷವನ್ನೆರೆವ, ಗಂಡಸರ ಮನಸ್ಸು ಮತ್ತು ಹೃದಯವನ್ನು
ಉನ್ನತ್ತಗೊಳಿಸುವ ಗಾಣ ನಿನ್ನ ಮೊಲೆ"[೧೩]
-----------------------------
-----------------------------

"ಒಂದು ಚುಂಬನದಿಂದ ನೀನು
ಒಂದು ಜೀವದ
ನೆನಪು ಆಶೆಗಳನ್ನೆಲ್ಲ
ಕೆಣಕುವುದನ್ನು
ಮರೆಯಬೇಡ"[೧೪]

ಪ್ರೇಮ ಕಾಮಗಳೊಂದಿಗೆ ಬದುಕುವ ಮನುಷ್ಯ ಪ್ರಕಟಪಡಿಸುವ ತೀವ್ರತೆಗೆ ಈ ಮೇಲೆ ನಿದರ್ಶನ ಕೊಟ್ಟ ಕಾವ್ಯ ಭಾಗಗಳೇ ಸಾಕ್ಷಿ. ಇಲ್ಲಿ ದೊಡ್ಡದು ದೇವರು, ಧರ್ಮ ಅಲ್ಲ, ಪ್ರೀತಿ, ಪ್ರೇಮ, ಕಾಮ. ಇದರ ಮುಂದೆ ದೇವರು, ಗುಡಿ ಎಲ್ಲವೂ ಶೂನ್ಯ ಎನ್ನುವುದು ಬೋದಿಲೇರನ ನಂಬಿಕೆಯಾಗಿತ್ತು. ಕಾವ್ಯಕ್ಕೂ ಜೀವನಕ್ಕೂ ಇರುವ ಸಂಬಂಧವನ್ನು ಚಿಂತಿಸುವ ಕಾವ್ಯ ಪಾಪದ ಹೂವುಗಳು. ಬದುಕಿನ ಕ್ರೂರ, ಅಕ್ರೂರ, ತಲ್ಲಣ, ತವಕವನ್ನು ಲೋಕದ ಯಾವುದೇ ಕಟ್ಟುಕಟ್ಟಳೆ, ನೀತಿ, ಧರ್ಮದ ಭಯವಿಲ್ಲದೆ ವ್ಯಕ್ತವಾಗಿದೆ.

ಬೋದಿಲೇರನ ಒಂದು ಪದ್ಯದೊಂದಿಗೆ ಸಾಮ್ಯವಿರುವ ನೀಲು ಪದ್ಯವನ್ನು ನೋಡಬಹುದು. ಬೋದಿಲೇರ್ ಪದ್ಯ

"ರಸ್ತೆಯಲ್ಲಿ ಕಿವಿಗಡಚಿಕ್ಕುವ ಸದ್ದು ನನ್ನ ಸುತ್ತ. ಆಗ
ಹೆಣ್ಣೊಂದು ಹಾದು ಹೋಯಿತು. ಎತ್ತರಕ್ಕೆ ತೆಳುವಾಗಿ,
ಕಪ್ಪು ಉಡುಪಿನಲ್ಲಿ ಗಂಭೀರವಾಗಿ ಶೋಕಿಸುತ್ತ,
ಮೋಹಕ ಕೈನಿಂದ ಸೆರಗು ಹಿಡಿದುಕೊಂಡು. ಆ ಚುರುಕು

**ಅಡಿಗಳ ಘನವಂತೆಯ ಶಿಲೆಯಂಥ ತೊಡೆ ನನಗೆ**
**ಕಾಣಿಸಿಕೊಂಡಿತು"[೧೫]**

ಈ ಪದ್ಯದೊಂದಿಗೆ ನೀಲು ಪದ್ಯವನ್ನು ಹೋಲಿಸಿ ನೋಡಬಹುದು.

**"ನಮ್ಮೂರ ಪೋಲಿ ಹುಡುಗರು**
**ವೈಯಾರಿ ರಾಮಿಯ ಬಣ್ಣಿಸುವ ರೀತಿ;**
**ರಾಮಿಯ ಸೊಂಟವ ಕಂಡು**
**ಹುಲಿ ಸೈತ**
**ಒಂಟಿಗಾಲಲ್ಲಿ ಕೂತು**
**ಅಂಗಲಾಚಿತು"[೧೬]**

ನೀಲು ಕವಿತೆಗಳು ಹೆಣ್ಣೊಬ್ಬಳು ನಿರೂಪಣೆ ಮಾಡುವ ರೀತಿಯಲ್ಲಿ ರಚನೆಗೊಂಡಿದ್ದರೂ, ಅಲ್ಲಿನ ಇಂಗಿತಗಳು ಗಂಡಿಗೆ ಹತ್ತಿರವಾಗಿರವಂತದ್ದು. ಈ ಸಾಲುಗಳಿಂದ ಅದು ಮತ್ತಷ್ಟು ಸ್ಪಷ್ಟವಾಗುತ್ತದೆ.

'ಎಜ್ರಾಪೌಂಡ್'ನ 'ಕಮಿಷನ್' ಕವನವನ್ನು 'ನನ್ನ ಗೀತವೆ ಹೋಗು' ಎಂಬ ಶೀರ್ಷಿಕೆಯಲ್ಲಿ ಅನುವಾದ ಮಾಡಲಾಗಿದೆ.

**"ನನ್ನ ಗೀತವೆ ಹೋಗು, ಅತೃಪ್ತ ಒಬ್ಬಂಟಿ ವ್ಯಕ್ತಿಗಳ ಬಳಿಗೆ;**
**ಹೋಗು ನರ ಕುಸಿದವರ, ಪದ್ಧತಿಯ ಪಾದಕ್ಕೆ ಸಿಕ್ಕವರ ಬಳಿಗೆ;**
**ತುಳಿವವರ ಬಳಿ ಹೋಗು ನನ್ನ ಕೋಪವ ಹೊತ್ತು;**
**ಹೋಗು ಸಂತೋಷಕರ ತಣ್ಣನೆಯ ಅಲೆಗಳ ಹಾಗೆ;**
**ನನ್ನ ತಿರಸ್ಕಾರವನ್ನಿಕ್ಕು ತುಳಿವ ಎಲ್ಲರಿಗೆ"[೧೭]**

'ನನ್ನ ಗೀತವೇ ಹೋಗು' ಇಲ್ಲಿ ಗೀತೆ ನಿಯೋಗವೊಂದನ್ನು ಹೊತ್ತೊಯ್ಯುತ್ತಿದೆ. ಎಂಥವರ ಬಳಿಗೆ, ಬೇಸತ್ತ ಬೂರ್ಜ್ವಾ ಹೆಣ್ಣುಗಳ ಬಳಿ, ಸಂಕಟವನ್ನು ಬಚ್ಚಿಟ್ಟ ವ್ಯಕ್ತಿಗಳ ಬಳಿ, ಮಾರಾಟವಾದ ಹೆಣ್ಣುಗಳ ಬಳಿ, ಅಬಲೆಯರ ಬಳಿಹೋಗು, ಸಮಾಜದಲ್ಲಿ ಅಂಚಿನಲ್ಲಿರುವ, ತುಳಿಯಲ್ಪಟ್ಟ ಶೋಷಣೆಗೆ ಒಳಗಾದ ಪ್ರತಿಯೊಬ್ಬರ ಬಳಿಗೆ ಹೋಗು, ಹೋಗಿ ಅವರನ್ನು ಎಚ್ಚರಗೊಳಿಸು ಸಮಾಜದಲ್ಲಿ ನಡೆಯುತ್ತಿರುವ ಶೋಷಣೆ, ದಬ್ಬಾಳಿಕೆಯನ್ನು ಪ್ರತಿಭಟಿಸುವಂತೆ ಪ್ರಚೋದಿಸು ಎಂದು ಕವಿ ನಿಯೋಗವೊಂದನ್ನು ಹೊರಡಿಸುತ್ತಿದ್ದಾನೆ.

"ಹೋಗು, ಅಭಿಪ್ರಾಯಗಳ ಎದುರಿಸು,
ಹೋಗು, ಎಲ್ಲ ಜಡ ರಕ್ತ ಸಂಬಂಧಗಳ ಚೆದುರಿಸು,
ಹೋಗು, ದತ್ತಿ ಉಂಬಳಿಗಳನ್ನು ತಿರಸ್ಕರಿಸು"[೭೮]

ಇಲ್ಲಿ ವರ್ಗವ್ಯವಸ್ಥೆಯನ್ನು ಒಡೆಯುವ ಪ್ರಯತ್ನವಿದೆ. ಅಂತೆಯೇ ವ್ಯವಸ್ಥೆಯಲ್ಲಿ ಅಂಚಿನಲ್ಲಿರುವುದನ್ನು ಕೇಂದ್ರಕ್ಕೆ ತರುವ ಹಂಬಲವಿದೆ. ಸಮಾಜದಲ್ಲಿ ಈಗಾಗಲೇ ಇರುವ ಸಿದ್ಧಾಂತವನ್ನೆಲ್ಲ ಮೀರಲಿಕ್ಕೆ. ಆ ಅಭಿಪ್ರಾಯವನ್ನು ಪ್ರತಿಭಟಿಸುವುದು ಈ ಕವಿತೆಯ ಒಟ್ಟು ತಿರುಳು. ಈ ಕವಿತೆಯನ್ನು ಓದುತ್ತಿದ್ದರೆ ಕುವೆಂಪು ರಚನೆಯ ಶಂಬೂಕ, ಊರ್ಮಿಳೆ, ಗುತ್ತಿ, ಐತ್ಲ, ಪಿಂಚಲು ಪಾತ್ರಗಳು ನೆನಪಿಗೆ ಬರುತ್ತವೆ. ಎಲ್ಲರೂ ಒಂದು ರೀತಿ ಶೋಷಣೆಗೆ ಒಳಗಾದವರು. ಆದರೆ ಅವರದೇ ಆದ ಭಿನ್ನ ನೆಲೆಗಳಲ್ಲಿ ಪ್ರತಿಭಟಿಸುತ್ತಾರೆ. ನಮ್ಮ ಸಂದರ್ಭದಲ್ಲಿ ಈ ಕವಿತೆ ಬಹಳ ಮುಖ್ಯವೆನಿಸುತ್ತದೆ. ಸಮಾಜದಲ್ಲಿ ಇರುವ ವರ್ಣ, ವರ್ಗ ವ್ಯವಸ್ಥೆಯನ್ನು ಸದೆಬಡಿಯಲು, ಶೋಷಣೆಗೆ ಒಳಗಾಗುತ್ತಿರುವ ಜನರನ್ನು ಎಚ್ಚರಿಸಲು ಇಂತಹ ಕವಿತೆಗಳು ಅವಶ್ಯಕವಾಗಿದೆ. ಹೀಗೆ ಲಂಕೇಶ್ ಅನ್ಯಸಂಸ್ಕೃತಿಯಲ್ಲಿ ಹುಟ್ಟಿದ ಕವಿತೆಯನ್ನು ನಮ್ಮ ಸಂಸ್ಕೃತಿಗೆ ಒಗ್ಗಿಸುವಲ್ಲಿ ಉತ್ತಮವಾಗಿ ಅನುವಾದ ಮಾಡಿದ್ದಾರೆ. ಇವರ ಅನುವಾದ ಕಾವ್ಯಗಳನ್ನು ಕುರಿತು ಮಾತನಾಡುವಾಗ ಇವರು ಅನುವಾದ ಮಾಡಿದ ನಾಟಕದ ಬಗ್ಗೆ ಮಾತನಾಡುವುದು ಮುಖ್ಯವೆನಿಸುತ್ತದೆ.

ಸೊಫೋಕ್ಲಿಸ್‌ನ 'ದೊರೆ ಈಡಿಪಸ್' ಮತ್ತು 'ಅಂತಿಗೊನೆ' ನಾಟಕವನ್ನು ಅನುವಾದ ಮಾಡಿದ್ದು, ರಂಗಪ್ರಜ್ಞೆ, ರಂಗಭಾಷೆ ಮತ್ತು ಕಾವ್ಯಪ್ರಜ್ಞೆ ಈ ಮೂರನ್ನು ಒಳಗೊಳಿಸಿ ಅನುವಾದಿಸಿದ್ದಾರೆ. ನಾಟಕದಲ್ಲಿ ದೊರೆ ಈಡಿಪಸ್ ತನ್ನ ತಾಯಿಯನ್ನೇ ವಿವಾಹವಾಗುತ್ತಾನೆ. ಅವರಿಬ್ಬರಿಗೂ ಹುಟ್ಟಿದ ಮಗುವೇ ಅಂತಿಗೊನೆ. ಯಾರೇ ಆದರೂ ಈ ರೀತಿಯ ವಿಚಿತ್ರ ಸಂಬಂಧವನ್ನು ಕೇಳಿದೊಡನೆ ಚಕಿತರಾಗುತ್ತಾರೆ. ಇಂತಹ ಸಂಬಂಧದಿಂದ ಹುಟ್ಟಿದ ಮಗುವನ್ನು ಸಮಾಜ ತಿರಸ್ಕಾರದಿಂದ ನೋಡುತ್ತದೆ. ಆದರೆ ಸೊಫೋಕ್ಲಿಸ್ ಇಲ್ಲಿ ಹೇಳ ಹೊರಟದ್ದು ಅಂತಿಗೊನೆ ವಿಚಿತ್ರ ಸಂಬಂಧದಿಂದ ಹುಟ್ಟಿದ್ದರೂ ಆಕೆಗೆ ಸಮಾಜದಲ್ಲಿ ಬದುಕಲು ಹಕ್ಕಿದೆ ಎಂಬುದನ್ನು ತಿಳಿಸ ಹೊರಡುತ್ತಾನೆ. ಒಮ್ಮೆ ಬೋದಿಲೇರ್ ಕವನಗಳ ಕಡೆ ಕಣ್ಣು ಹೊರಳಿಸಿದರೆ ಅಲ್ಲಿಯೂ ಇಂತಹ ಬದುಕಿನ ಎಷ್ಟೋ ವಿಚಿತ್ರ, ವಿಕೃತ, ಆಶ್ಚರ್ಯವನ್ನು ಹುಟ್ಟಿಸುವ ಸಂಗತಿಗಳೆಲ್ಲವನ್ನು ಹೇಳುತ್ತಾನೆ. ಬಹುಶಃ ಇಲ್ಲೇ ಲಂಕೇಶ್‌ರಿಗೆ ಸೊಫೋಕ್ಲಿಸ್ ಮತ್ತು ಬೋದಿಲೇರ್ ಹತ್ತಿರವಾದದ್ದೆನಿಸುತ್ತದೆ.

ಕವನಗಳ ಅನುವಾದ ಕುರಿತು ಟಿಪ್ಪಣಿಯಲ್ಲಿ ಲಂಕೇಶ್ ಬೋದಿಲೇರನ ಬಗ್ಗೆ, ಅನುವಾದ ಸಂದರ್ಭವನ್ನು ಹೀಗೆ ಹೇಳುತ್ತಾರೆ. "ತನ್ನ ನೋವನ್ನೆಲ್ಲ ಕಾವ್ಯದಲ್ಲಿ ಚೆಲ್ಲಿಕೊಳ್ಳುತ್ತಲೇ ಅದಕ್ಕೆ ಸ್ವಂತ

ಜೀವ ಬರುವಷ್ಟು ಕಲಾತ್ಮಕತೆ ತೋರಿರುವುದು ಬೋದಿಲೇರನ ಹಿರಿಮೆ. ಈ ಬಗ್ಗೆ ಮತ್ತೇ ಹೇಳಬೇಕಿಲ್ಲ. ಬೋದಿಲೇರನಂಥ ಕವಿಯನ್ನು ಅನುವಾದಿಸುವಾಗ ಹಲವಾರು ಕಷ್ಟಗಳಿವೆ. ಅವನ ಕಾವ್ಯದ ನಾಜೂಕು, ಖಚಿತವಾದ ಲಯ, ಗೇಯತೆಯನ್ನು ಇನ್ನೊಂದು ಭಾಷೆಯಲ್ಲಿ ಹಿಡಿದಿಡುವುದು ಕಷ್ಟ; ಹಿಡಿದಿಡಲು ಪ್ರಯತ್ನಿಸಿದೊಡನೆ ಆತನ ಬಂಧದಲ್ಲಿ ಸ್ವಚ್ಛಂದವಾಗಿ ಹರಿದಾಡುವ ಜೀವಾಳ ನಾಶವಾಗುತ್ತದೆ. ಈ ಕಾರಣದಿಂದಾಗಿ ಆತನ ಕವನಗಳನೇಕವನ್ನು ಗದ್ಯಾನುವಾದಗಳಾಗಿ ಮಾತ್ರ ಹಲವಾರು ಭಾಷೆಗಳಿಗೆ ತಂದಿದ್ದಾರೆ. ನಾನು ಕೂಡ ಇಲ್ಲಿ ಮಾಡಿರುವುದು ಗದ್ಯಾನುವಾದ; ಇಂಗ್ಲೀಷ್ ಭಾಷೆಯಿಂದ ಕೆಲವು ಸಲ 'ಒಟ್ಟಾರೆ' ಅನ್ನಿಸಿಕೊಳ್ಳುವಂತಾಗಿದೆ; ಕೆಲವೊಮ್ಮೆ ಅವನ ಪ್ರಖರತೆ ಕೆಡಬಾರದೆಂದು ಸೂಕ್ಷ್ಮವನ್ನು ಎಳೆದು ಸರಳ ಮಾಡಿದ್ದೇನೆ. [illegible] ಕೆಲವೊಮ್ಮೆ ಬೇಕೆಂತಲೇ ಸಜೀವ ಒರಟು ಪದ ಬಳಸಿ ಓದುಗರ ಗಮನ ಸೆಳೆಯಲು ಯತ್ನಿಸಿದ್ದೇನೆ"

ಕವನಗಳ ಅನುವಾದ ಅದರ ತೊಂದರೆ, ಫ್ರೆಂಚ್ ಭಾಷೆಯಲ್ಲಿದ್ದ ಬೋದಿಲೇರ್ ಕವನ ಇಂಗ್ಲೀಷ್‌ಗೆ ಅನುವಾದ ಗೊಂಡದ್ದನ್ನು ಲಂಕೇಶ್ ಕನ್ನಡಕ್ಕೆ ತಂದಿದ್ದಾರೆ. ಲಂಕೇಶ್ ಕನ್ನಡದ ಜಾಯಮಾನಕ್ಕೆ ಒಗ್ಗಿಸುವಲ್ಲಿ ಆದ ತೊಂದರೆ ನಿವಾರಿಸಿಕೊಂಡು, ಬೋದಿಲೇರ್‌ನ ಕಾವ್ಯದ ಲಯ, ಭಾಷೆ, ಕವನಗಳ ನಾಜೂಕು ಇವೆಲ್ಲವೂ ಕೆಡದಂತೆ ಭಾಷೆಯನ್ನು ಮುಕ್ತವಾಗಿ ಬಳಸಿ ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

ಪಾಶ್ಚಾತ್ಯ ಕಾವ್ಯಗಳು ಮನುಷ್ಯ ಮನುಷ್ಯನ ನಡುವಿನ ಬೆಸುಗೆಯನ್ನು, ವ್ಯಕ್ತಿಯ ಇರುವಿಕೆಯನ್ನು, ವಾಸ್ತವತೆಯನ್ನು ವ್ಯಾಖ್ಯಾನಿಸುತ್ತದೆ. ಇಂತಹ ಕಾವ್ಯವನ್ನು ಕನ್ನಡಕ್ಕೆ ಲಂಕೇಶ್ ಅನುವಾದಿಸಿದ್ದಾರೆ. 'ನಿವೇದನೆ' ಕವಿತೆಯಲ್ಲಿ 'ಟಂಕಸಾಲೆಯಿಂದ ಅದೇ ತಾನೆ ಹೊರಬಿದ್ದ ಮೆಡಲಿನಂತೆ ಚಂದ್ರ' ಎಂಬ ಹೊಸ ರೂಪಕದ ಬಳಕೆ ಕಾಣಬಹುದು. ಕೆಲವೊಮ್ಮೆ ರೂಪಕಕ್ಕೆ ಜೀವ ಇಲ್ಲದೆ ಇರುವ ಸಂದರ್ಭದಲ್ಲಿ ಕಾವ್ಯ ಸಾಯುತ್ತದೆ. ಇನ್ನು ಕೆಲವೊಮ್ಮೆ ಹೊಸ ರೂಪಕಗಳಿಂದ ಕಾವ್ಯ ಗೆಲ್ಲುತ್ತದೆ. ಈ ಎಚ್ಚರಿಕೆಯನ್ನು ಲಂಕೇಶ್ ವಹಿಸಿದ್ದಾರೆ. 'ಇಲ್ಲಿಂದ ದೂರದಲ್ಲಿ', 'ಭಾವಚಿತ್ರ' ಕವಿತೆಗಳಲ್ಲಿ ಉದ್ಧರಣ ವಾಕ್ಯವನ್ನು ಬಳಸಲಾಗಿದೆ. "ನಮ್ಮ ರೋಗ ಮತ್ತು ಸಾವು ನಮ್ಮಲ್ಲಿ ಉರಿವ ಎಲ್ಲ ಬೆಂಕಿಗಳನ್ನು ಬೂದಿಯಾಗಿಸುತ್ತದೆ. ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಮೂಡಿದ ಈ ಸಾಲುಗಳನ್ನು ಇಲ್ಲಿನ ಸಂಸ್ಕೃತಿಗೆ ಒಗ್ಗಿಸುವ ಕ್ರಮವಿದೆ.

ಮನುಷ್ಯನ ಸಣ್ಣತನ, ಪೊಳ್ಳುತನ, ಮುಗ್ಧತೆ, ಕೊಳಕುತನ, ಕೃತಕತೆ, ಮುಗ್ಧತೆ, ಹುಸಿನಂಬಿಕೆ ಇವೆಲ್ಲವನ್ನು ಲಂಕೇಶ್ ಕಾವ್ಯ ತೆರೆದಿಡುತ್ತದೆ. ಈ ಅಂಶದಲ್ಲೇ ಲಂಕೇಶ್ ಸ್ವರಚನೆಯ ಕಾವ್ಯಕ್ಕೂ ಬೋದಿಲೇರ್ ಕವನಗಳ ಅನುವಾದಕ್ಕೂ ಭಿನ್ನತೆ ಇದೆ ಎಂದೆನಿಸುವುದಿಲ್ಲ. ಸ್ವಂತ ರಚನೆಯ

ಕವನಗಳೇ ಎಂದೆನಿಸುತ್ತದೆ. ಹೀಗೆ ಬೋದಿಲೇರನ ಮೂಲಕ ಸಂಸ್ಕೃತಿಯನ್ನು ಗ್ರಹಿಸುವ ಕ್ರಮವಿದೆ. 'ಪಾಪದ ಹೂವುಗಳು' ಕೃತಿ ಒಂದು ಸಾಂಸ್ಕೃತಿಕ ಸ್ವೀಕಾರ ಅಂತೆಯೇ ಲಂಕೇಶರ ಸೃಜನಶೀಲತೆಗೆ ಸಾಕ್ಷಿಯಾಗಿದೆ. ಹೀಗೆ ಅನುವಾದ ಯಾಂತ್ರಿಕೃತವಾಗದೆ ಸಹಜ ಮತ್ತು ಸೃಜನಾತ್ಮಕವಾಗಿ ಮೂಡಿಬಂದಿದೆ. ಲಂಕೇಶ್ ಅನುವಾದವನ್ನು ಮಾಡಿರುವುದು ಬಹಳ ಕಡಿಮೆ. ಆದರೆ ಮಾಡಿರುವ ಕೆಲವೇ ಅನುವಾದಗಳನ್ನು ಅದ್ಭುತವಾಗಿ ಮಾಡಿದ್ದಾರೆ.

## ಕೊನೆ ಟಿಪ್ಪಣಿ

೧. ತಲೆಮಾರಿನ ತಳಮಳ, (ಸಂ) ಗಂಗಾಧರ ಕುಷ್ಟಗಿ, ಕವಿತಾ ಪ್ರಕಾಶನ, ಪುಟಸಂಖ್ಯೆ – ೧೬೧

೨. ಪಾಪದ ಹೂವುಗಳು, ಪಿ.ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ – ೧೭

೩. ಅದೇ, ಪುಟ – ೩೫

೪. ಅದೇ, ಪುಟ – ೪೯

೫. ಅದೇ, ಪುಟ – ೫೧

೬. ಅದೇ, ಪುಟ – ೬೯

೭. ಅದೇ, ಪುಟ – ೩೮

೮. ಅದೇ, ಪುಟ – ೪೪

೯. ಅದೇ, ಪುಟ – ೬೨

೧೦. ತಲೆಮಾರಿನ ತಳಮಳ, (ಸಂ) ಗಂಗಾಧರ ಕುಷ್ಟಗಿ, ಕವಿತಾ ಪ್ರಕಾಶನ, ಪುಟಸಂಖ್ಯೆ – ೧೬೦

೧೧. ಚಿತ್ರಸಮೂಹ, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ – ೧೨೪

೧೨. ಅದೇ, ಪುಟ – ೪೭

೧೩. ಪಾಪದ ಹೂವುಗಳು, ಪಿ.ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ – ೬೪

೧೪. ನೀಲುಕಾವ್ಯ ಸಂಗ್ರಹ–೩, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ –೮೮

೧೫. ಪಾಪದ ಹೂವುಗಳು, ಪಿ.ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ – ೪೨

೧೬. ನೀಲುಕಾವ್ಯ ಸಂಗ್ರಹ–೩, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ –೨೨

೧೭. ಚಿತ್ರಸಮೂಹ, ಲಂಕೇಶ್, ಲಂಕೇಶ್ ಪ್ರಕಾಶನ, ಪುಟಸಂಖ್ಯೆ – ೨೧

೧೮. ಅದೇ, ಪುಟ –೨೨

# ಅಧ್ಯಾಯ – ೬

## ಸಮಾರೋಪ

ಹೊಸಗನ್ನಡ ಸಾಹಿತ್ಯದ ಆರಂಭಕಾಲವನ್ನು ೧೯ನೇ ಶತಮಾನ ಎಂದು ಗುರುತಿಸಬಹುದು. ಈ ಸಂದರ್ಭದಲ್ಲಿ ರಚನೆಯಾದ ಸಾಹಿತ್ಯ ಹಾಗೂ ಸಾಹಿತಿಗಳ ಧೋರಣೆಗಳ ಆಧಾರದ ಮೇಲೆ ವಿಮರ್ಶಕರು ಹೊಸಗನ್ನಡ ಸಾಹಿತ್ಯವನ್ನು ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಎಂದು ನಾಲ್ಕು ಘಟ್ಟಗಳಾಗಿ ವಿಂಗಡಿಸುತ್ತಾರೆ. ಆದರೆ ಕನ್ನಡ ಸಾಹಿತ್ಯಲೋಕದಲ್ಲಿ ಈ ರೀತಿಯ ಚೌಕಟ್ಟಿನಲ್ಲಿ ಸಿಲುಕಿಕೊಳ್ಳದೇ ಅದನ್ನು ಮೀರಿ ಸಾಹಿತ್ಯ ರಚನೆ ಮಾಡಿದ ಹಲವು ಸಾಹಿತಿಗಳಲ್ಲಿ ಲಂಕೇಶ್ ಕೂಡ ಒಬ್ಬರು ಎಂಬುದು ಈಗಾಗಲೇ ಗುರುತಿಸಲಾಗಿದೆ.

೧೯೬೦–೭೦ರಲ್ಲಿ ಬರವಣಿಗೆಯಲ್ಲಿ ತೊಡಗಿದ್ದ ಲಂಕೇಶ್ ಆ ಸಂದರ್ಭದಲ್ಲಿ ಹೆಚ್ಚು ಪ್ರಚಲಿತವಿದ್ದ ಅಸ್ತಿತ್ವವಾದ, ಅಸಂಗತವಾದವನ್ನು ಬಳಸಿಕೊಂಡು ರಚನೆ ಮಾಡಿದ್ದರೂ ಅವೆಲ್ಲವೂ ಸಮಾಜಾಭಿಮುಖ ಬರವಣಿಗೆಗಳಾಗಿವೆ. ವ್ಯಕ್ತಿ ವಸಾಹತುಶಾಹಿ ತಂದೊಡ್ಡಿದ್ದ ಜಾಗತೀಕರಣಕ್ಕೆ ಸಿಲುಕಿಕೊಂಡು ತನ್ನ ಇರುವಿಕೆಯ ನೆಲೆಯನ್ನು ಹುಡುಕಾಡುವುದರ ಚಿತ್ರಣವನ್ನು ಅವರ ಕಾವ್ಯದಲ್ಲೇ ಗುರುತಿಸಬಹುದು. ಪ್ರಾರಂಭದಲ್ಲಿ ವೈಯಕ್ತಿಕ ಧೋರಣೆಗಳಿಗೆ ಬೆಲೆಕೊಟ್ಟು ಸಾಹಿತ್ಯ ರಚನೆ ಮಾಡಿದ್ದರು. ಆನಂತರದ ಅವರ ಹಲವು ಬರವಣಿಗೆಗಳು ಸಮಾಜನಿಷ್ಠವಾಗಿದೆ. ಒಂದು ರೀತಿ ಸಮಾಜದ ಕೊರತೆಗಳನ್ನು ನಿವಾರಿಸಬೇಕು ಎಂಬ ಹಂಬಲವನ್ನು ಹೊತ್ತು ಬಂದ ಸಾಹಿತ್ಯ ರಚನೆಯನ್ನು ಕಾಣಬಹುದು.

ಲಂಕೇಶರ ಒಟ್ಟು ಕಾವ್ಯವನ್ನು ಮತ್ತೊಮ್ಮೆ ಮೆಲುಕು ಹಾಕುವುದಾದರೆ ನಗರ–ಗ್ರಾಮ ಜೀವನದ ನಡುವಿನ ಮುಖಾಮುಖಿಯನ್ನು ಹೇಳುತ್ತಾ ಸಾಂಸ್ಕೃತಿಕ ಶೋಧನೆಗಾಗಿ ಕಾವ್ಯ ಹೊರಬಂದಂತೆ ಭಾಸವಾಗುತ್ತದೆ. ಇವರ ಕಾವ್ಯ ನಾಗರೀಕ ಸಮಾಜವನ್ನು ತಿರಸ್ಕರಿಸಿ ಹುಟ್ಟಿದ ರೀತಿಯಲ್ಲಿ ಕಾಣುತ್ತದೆ. ಅಲ್ಲಿ ನಗರ–ಗ್ರಾಮಗಳ ನಡುವಿನ ವೈರುಧ್ಯವನ್ನು ಕಾಣಬಹುದು. ಯಾಂತ್ರೀಕರಣಕ್ಕೆ ಒಳಗಾದ ಜನರ ಯಾಂತ್ರಿಕ ಬದುಕನ್ನು, ನಗರ ಜನರ ಅಹಂಕಾರವನ್ನು ಹೇಳುತ್ತಾ ಹಳ್ಳಿ ಜನರ ಮುಗ್ಧತೆಯನ್ನು, ಸಾಚತನವನ್ನು ಹೇಳುತ್ತದೆ. ನಮ್ಮ ಕಡೆಯ ಜನ ನನ್ನಸುತ್ತಾ, ಇಲ್ಲೆಲ್ಲಾ ಪಟ್ಟಣ ಹಾಗೂ ಗ್ರಾಮೀಣ ಸಂಸ್ಕೃತಿಗಳ ಪರಿಚಯ ಮಾಡಿಕೊಡುತ್ತಾರೆ. ಹೀಗೆ ಆಧುನಿಕತೆಯ ಪ್ರಭಾವಕ್ಕೆ ಒಳಗಾದ ಗ್ರಾಮದ ಜನರ ಜೀವನ ತಲ್ಲಣ ಹಾಗೂ ಗ್ರಾಮದ ಸ್ಥಿತಿಗತಿಗಳಲ್ಲಿ ಉಂಟಾದ ಸಾಮಾಜಿಕ, ಸಾಂಸ್ಕೃತಿಕ ಸ್ಥಿತ್ಯಂತರವನ್ನು ಇವರ ಕಾವ್ಯ ಕಟ್ಟಿಕೊಡುತ್ತದೆ.

ಮಾನವ ಸಂಬಂಧಗಳ ನಡುವಿನ ಬಿರುಕನ್ನು, ಸಾಂಪ್ರದಾಯಿಕ ಸಂಬಂಧಗಳಲ್ಲಿ ಕಂಡುಬರುವ ಬಿಗುವನ್ನು ಅಕ್ಕ – ತಮ್ಮ ಕವಿತೆ ಚಿತ್ರಿಸುತ್ತದೆ. ಇಲ್ಲಿ ಬರುವ ನಿರೂಪಕ ತನ್ನ ಅಕ್ಕನ ಮೇಲೆ ಪಡುವ ಸಂಶಯ ಅವನಲ್ಲೇ ಮೂಡುವ ಗೊಂದಲ, ದ್ವಂದ್ವ ಯಾವುದಕ್ಕೂ ಉತ್ತರವಿಲ್ಲದ ಸ್ಥಿತಿಯಲ್ಲಿ ನಿಲ್ಲುತ್ತಾನೆ. ಇತ್ತೀಚಿನ ಸಂದರ್ಭದಲ್ಲಿ ಸಾಂಪ್ರದಾಯಿಕ ಸಂಬಂಧಗಳಲ್ಲಿ ಕಂಡುಬರುವ ಅಂತರವನ್ನು ಈ ಕವಿತೆ ಚಿತ್ರಿಸುತ್ತದೆ.

ಇನ್ನು ೧೯೮೦ರಿಂದೀಚೆಗೆ ಇವರು ಬರೆದ ಹಲವು ಕವಿತೆಗಳು ಸಾಮಾಜಿಕ ಕಾಳಜಿಯನ್ನು ಹೊಂದಿವೆ. ಹಾಗೆಂದು ಹಿಂದಿನ ರಚನೆಯ ಕಾವ್ಯದಲ್ಲಿ ಸಾಮಾಜಿಕ ಕಾಳಜಿ ಇರಲಿಲ್ಲವೆಂದಲ್ಲ. 'ನನ್ನಸುತ್ತಾ', 'ನಮ್ಮ ಕಡೆಯ ಜನ' ಕವಿತೆಯಲ್ಲಿ ಬೂಚಿಮುಚ್ಚಿದ ಕೆಂಡದಂತೆ ಕಾಣಸಿಗುತ್ತದೆ. ಅನಂತರ ರಚನೆಯಾದ 'ಗೋಡೆಯ ಜನ', 'ಮಾವಿನಮರದಡಿಯ ದೃಶ್ಯ'. ಕವಿತೆಗಳು ಜಾತಿ, ಧರ್ಮ, ಪಂಗಡ, ಕೋಮುಗಳ ನಡುವೆ ನಡೆಯುವ ಜಗಳ ಹಾಗೂ ವೈರತ್ವವನ್ನು ಕವಿತೆ ಬಿಚ್ಚಿಡುತ್ತಾ, ಕೋಮುಸೌಹಾರ್ದವನ್ನು ಹೇಳುತ್ತಿದೆ. ಈ ಕವಿತೆಗಳು ೬೦–೭೦ರ ದಶಕದಲ್ಲಿ ರಚನೆಯಾಗಿದ್ದರೂ ಇಂದಿಗೂ ಪ್ರಸ್ತುತವಾಗಿದೆ. ಹೀಗೆ ಲಂಕೇಶ್ ಕವಿತೆಗಳು ನಗರ–ಗ್ರಾಮೀಣ ಸಂಸ್ಕೃತಿಯನ್ನು ಅನಾವರಣಗೊಳಿಸುತ್ತಾ, ಅಲ್ಲಿ ನಡೆಯುವ ಜಾತಿ, ಧರ್ಮ, ಕೋಮುವಾದವನ್ನು ಪ್ರಶ್ನೆ ಮಾಡುತ್ತಾ, ಅದನ್ನು ಹತ್ತಿಕ್ಕಲು ಪ್ರಯತ್ನಿಸುತ್ತದೆ. ಅವರ ಒಟ್ಟುಕಾವ್ಯವು ಬಾಲ್ಯದ ಮುಗ್ಧತೆ, ಪ್ರೌಢಾವಸ್ಥೆಯ ಪ್ರಬುದ್ಧತೆಯನ್ನು ಹೇಳುತ್ತಾ ಮನುಷ್ಯನ ಅವಸ್ಥೆಯ ಪಾಡನ್ನು, ಅದರ ನಡುವೆ ಸಂಪ್ರದಾಯಿಕ ಸಂಬಂಧಗಳ ನಡುವಿನ ಬಿಗುವನ್ನು ಹೇಳುತ್ತದೆ. ಹೀಗೆ ಗ್ರಾಮ, ನಗರದ ಸಂಸ್ಕೃತಿ, ಸಾಮಾಜಿಕ ಸಂಸ್ಕೃತಿ, ರಾಜಕೀಯ ಸಂಸ್ಕೃತಿಯನ್ನು ಅನಾವರಣಗೊಳಿಸುತ್ತದೆ. ಹೀಗೆ ಜಾಗತೀಕರಣ, ಯಾಂತ್ರೀಕರಣಕ್ಕೆ ಒಳಗಾಗಿರುವ ನಗರ ಸಂಸ್ಕೃತಿಯನ್ನು ಪ್ರಶ್ನಿಸುತ್ತಾ ಅದನ್ನು ಪ್ರತಿರೋಧಿಸುತ್ತಾ ಪರ್ಯಾಯ ಸಂಸ್ಕೃತಿಯೊಂದನ್ನು ಹುಡುಕುವ ಕ್ರಮವಿದೆ. ಅಷ್ಟೇ ಅಲ್ಲ ಈಗಾಗಲೇ ಸಮಾಜ ಕೆಲವೊಂದು ಸಿದ್ಧಮಾದರಿಗಳನ್ನು ರೂಪಿಸಿಕೊಂಡಿತ್ತು. ಅಂದರೆ ಯಾವುದು ಸಭ್ಯತೆ, ಶಿಷ್ಟ, ನೈತಿಕತೆ ಎಂದು ಅರ್ಥೈಸಲಾಗಿತ್ತೋ ಅವೆಲ್ಲವನ್ನು ಮೀರಿದ್ದು ಸಂಸ್ಕೃತಿ ಎನ್ನುವ ದೃಷ್ಟಿಯಲ್ಲಿ ಕಾಣುತ್ತಾರೆ.

ಕಾವ್ಯವನ್ನು ಹೊಸ ಹೊಸ ತಂತ್ರಗಾರಿಕೆ, ನಿರೂಪಣೆಯ ಮೂಲಕ ರಚಿಸಿ ಮನುಷ್ಯನ ಬದುಕಿನ ನೈಜ ಸತ್ಯವನ್ನು ಅನಾವರಣಗೊಳಿಸುತ್ತಾರೆ. ಅಲ್ಲಿ ವ್ಯಕ್ತಿಯ ನೋವು–ನಲಿವು, ಸುಖ–ದುಃಖ ಎಲ್ಲವನ್ನು ದಾಖಲಿಸುತ್ತಾರೆ. ಸಮಾಜದ ಸಮಸ್ಯೆಗಳು, ಜಾತಿ, ವರ್ಣ, ಲಿಂಗ, ಇವುಗಳ ಬಗ್ಗೆ ಸಮಾಜದ ಒಪ್ಪಿತ ಮೌಲ್ಯವನ್ನು ಅಲ್ಲಗಳೆದು ತಮ್ಮದೇ ಆದ ಹೊಸ ಆಲೋಚನ ಮಾದರಿಗಳನ್ನು ಕಂಡುಕೊಳ್ಳುವಲ್ಲಿ ಇವರ ಕಾವ್ಯವು ಪ್ರಮುಖ ಪಾತ್ರವಹಿಸಿದೆ. ಇದಕ್ಕೆ ಉದಾಹರಣೆ ಎಂಬಂತೆ ನೀಲು ಕವನವನ್ನು ಹೆಣ್ಣಿನ ಮೂಲಕ ನಿರೂಪಣೆ ಮಾಡಿರುವುದನ್ನು ಕಾಣಬಹುದು. ಆಕೆ ಯಾವುದೇ

ಸಂಕೋಚ, ನಾಚಿಕೆಗೆ ಒಳಗಾಗದೆ ದಿಟ್ಟವಾಗಿ ಸಮಾಜದ ಆಗುಹೋಗುಗಳಿಗೆ ಸ್ಪಂದಿಸುತ್ತಿದ್ದಾಳೆ. ಸಮಾಜವು ಹೆಣ್ಣಿನ ಮೇಲೆ ಹೇರಲಾಗಿದ್ದ ಸಿದ್ಧಮಾದರಿಯ ಗುಣವನ್ನು ಈ ತಂತ್ರದ ಮೂಲಕ ಹೊಡೆದು ಹಾಕಿದ್ದಾರೆ. ಇದು ಲಂಕೇಶ್ ಬರವಣಿಗೆಯ ಸೃಜನಶೀಲತೆಯೂ ಹೌದು.

ಹನ್ನೆರಡನೆ ಶತಮಾನದಲ್ಲಿ ಅಕ್ಕಮಹಾದೇವಿ ಅಂದಿನ ಸಮಾಜವನ್ನು ಪ್ರತಿಭಟಿಸಿ ನಿಂತ ಹೆಣ್ಣು. ಆಕೆಯ ಪ್ರಭಾವಕ್ಕೆ ಒಳಗಾಗಿ ರಚನೆಯಾದ ಕವನಗಳಂತೆ ನೀಲುಕವನಗಳು ಮೂಡಿಬಂದಿವೆ. ನೀಲು ಕೂಡ ಇಂದಿನ ಸಮಾಜದ ಗೊಡ್ಡು ಸಂಪ್ರದಾಯವನ್ನು, ಸಮಾಜದಲ್ಲಿನ ಮುಖವಾಡದ ಜನರನ್ನು ಟೀಕಿಸುತ್ತಾಳೆ. ಜೊತೆಗೆ ಹೊಸ ಅನಿಸಿಕೆ, ನಂಬಿಕೆ, ಹಾದರ, ಸ್ನೇಹ, ಪ್ರತಿಭಟನೆ, ಸಂತಸ, ಮೌನ, ಚಳಿಗಾಲ, ಮಳೆಗಾಲ, ಬಯಕೆ, ಹಕ್ಕಿ, ಸಾವು, ಕಾಮ, ತನ್ನ ಸುತ್ತಲೂ ನಡೆಯುವ ಘಟನೆಗಳು ತನ್ನೊಳಗೆ ಉಂಟಾಗುವ ತಲ್ಲಣಗಳು, ಸಂತಸವನ್ನು ಹೇಳಲಾಗುತ್ತಿದೆ. ಹೀಗೆ ಲಂಕೇಶ್ ತಮ್ಮ ಅನುಭವಕ್ಕೆ ದಕ್ಕಿದ್ದನ್ನು ವಸ್ತು, ಘಟನೆಯಾಗಿಸಿ ಕೊಳ್ಳುವಂತೆ ಹೇಳಬೇಕಾಗಿರುವುದನ್ನು ಸ್ಪಷ್ಟವಾಗಿ ಮೈಗೂಡಿಸಿಕೊಂಡು ಸಂಕ್ಷಿಪ್ತವಾಗಿ ನಾಲ್ಕಾರು ಸಾಲುಗಳಲ್ಲಿ ಹೇಳಲಾಗಿದೆ. ಕವಿತೆಗಳು ಸರಳವಾಗಿ ಓದುಗನೊಳಗೆ ಅರ್ಥದ ಅಲೆಗಳನ್ನುಂಟು ಮಾಡುತ್ತವೆ. ಹೀಗೆ ಓದುಗರಿಗೆ ನೀಲು ಕವಿತೆಗಳು ಮನಸ್ಸಿನಲ್ಲಿ ನಿಲ್ಲಲು ಕಾರಣವಾಗಿದೆ. ಹೀಗೆ ಸಾಹಿತ್ಯ ಸಾಂಸ್ಕೃತಿಕ ಅನನ್ಯತೆಯನ್ನು ಸೃಷ್ಟಿಸಿಕೊಳ್ಳುವಲ್ಲಿ ಲಂಕೇಶರ ನೀಲುಕಾವ್ಯ ಮಹತ್ವದ ಪಾತ್ರ ನಿರ್ವಹಿಸಿದೆ.

ಪ್ರೇಮ ಮತ್ತು ಕಾಮವನ್ನು ಸಮಾಜವು ಗೌಪ್ಯವಾಗಿಡಲು ಪ್ರಯತ್ನಿಸುತ್ತದೆ. ಸಮಾಜದಲ್ಲಿ ಕಾಮ, ಪ್ರೇಮ, ನೀತಿ ಹಾಗೂ ಅನೀತಿಗಳ ನಡುವೆ ಹುಟ್ಟಿಕೊಂಡಿರುವಂತದ್ದು. ಇವನ್ನು ಸಂಪ್ರದಾಯವಾದಿಗಳು ಗುಪ್ತವಾಗಿಡಲು ಪ್ರಯತ್ನಿಸುತ್ತಾರೆ. ಅದರ ಹೆಜ್ಜೆಗಳು, ರೀತಿ, ನೀತಿಗಳೂ, ತಿಳಿಯಕೂಡದೆಂಬಂತೆ ಆತ್ಮವಂಚನೆಯ ಮುಚ್ಚಳಿಕೆ ಹಾಕಿದ್ದರು. ಆದರೆ ಲಂಕೇಶ್ ಅವೆಲ್ಲವನ್ನು ಹೊಡೆದುಹಾಕಿ ಹೊಸಪ್ರಜ್ಞೆಯನ್ನು ಬೆಳೆಸುವಲ್ಲಿ ಯಶಸ್ವಿಯಾಗಿದ್ದಾರೆ.

ಲಂಕೇಶರ ಒಟ್ಟು ಕಾವ್ಯವು ಮನುಷ್ಯನ ಅನುಭವದ ಘಾತದಂತೆ ಕಂಡುಬರುತ್ತದೆ. ಬೋದಿಲೇರನ ಕಾವ್ಯ ಲಂಕೇಶರಿಗೆ ಹತ್ತಿರವಾಗುವುದು ಇಲ್ಲಿಯೇ ಬೋದಿಲೇರನ ಕಾವ್ಯದ ಮಹತ್ವವಿರುವುದು ಅನುಭವದ ಹಿನ್ನೆಲೆಯಲ್ಲಿ. ಈತ ಮನುಷ್ಯನ ಅಸ್ತಿತ್ವದ ಬಗ್ಗೆ ಬಹಳ ಚಿಂತನೆ ನಡೆಸಿದವನು. 'ಓದುಗನಿಗೆ', 'ಶತ್ರು', 'ಏಕಾಂಗಿಯ ವೈನ್', 'ಭಾವಚಿತ್ರ', 'ಅತ್ಯಂತ ಉಲ್ಲಾಸದ ಆಕೆಗೆ', 'ನಿವೇದನೆ', 'ಬೇಸರ', ಕಾವ್ಯದಲ್ಲಿ ಕಾಲನನ್ನು ತಿರಸ್ಕರಿಸುತ್ತಾ, ವ್ಯಕ್ತಿಯ ಇರುವಿಕೆಯನ್ನು ಗುರುತಿಸುತ್ತಾ ಆತನ ಮನಸ್ಸಿನ ವಿಕೃತಿ ಲಕ್ಷಣವನ್ನು ಹೇಳಲಾಗುತ್ತಿದೆ. ಲಂಕೇಶ್ ಕಾವ್ಯ ಕೂಡ ಮನುಷ್ಯನ ಸಣ್ಣತನ, ಪೊಳ್ಳುತನ, ಮುಗ್ಧತೆ, ಕೊಳಕುತನ, ಕೃತಕತೆ, ಹುಸಿನಂಬಿಕೆ, ಒಟ್ಟಾರೆ ಮನುಷ್ಯನ ಬದುಕನ್ನು ಅನಾವರಣಗೊಳಿಸುತ್ತದೆ. ಕನ್ನಡ ಮತ್ತು ಇಂಗ್ಲೀಷ್ ಭಾಷಾ-ಸಾಹಿತ್ಯಗಳಿಗೆ ಅತ್ಯಂತ ತೀವ್ರವಾಗಿ

ಸ್ಪಂದಿಸಿದ ಅವರು ತಮ್ಮ ಸೃಜನಶೀಲ ರಚನೆಗಳಲ್ಲಿ ಸ್ವಂತಿಕೆಯನ್ನು ಮೆರೆದಿದ್ದಾರೆ. ಹೀಗೆ ಅವರ ಕಾವ್ಯ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿ ಮೂಡಿಬಂದಿದೆ.

ಒಬ್ಬ ವ್ಯಕ್ತಿಯಾಗಿ, ಬರಹಗಾರರಾಗಿ ಲಂಕೇಶ್ ಬೆಳೆದಂತೆಲ್ಲ ಕಾವ್ಯಶಕ್ತಿಯೂ ಅವರ ಆಳದಲ್ಲಿ ವಿಕಸನಗೊಳ್ಳುತ್ತಾ ನಡೆದದ್ದನ್ನು ಅವರ ಒಟ್ಟಾರೆ ಕಾವ್ಯದಲ್ಲಿ ಕಾಣಬಹುದು. ಅಕ್ಕ, ಬಸವಣ್ಣ, ಅಡಿಗ, ಎಲಿಯಟ್, ಬೋದಿಲೇರ್, ನೆರೂಡ ಇವರೆಲ್ಲರಿಂದ ಪ್ರೇರಿತಗೊಂಡಿದ್ದರು. ಹಾಗಾಗಿ ಇವರ ಸಾಹಿತ್ಯ ರಾಜಕೀಯ ಬದುಕು, ಸಮಕಾಲೀನ ಬದಲಾವಣೆಯ ಆಯಾಮಗಳಿಗೆ ಸ್ಪಂದಿಸುತ್ತಿತ್ತು. ಸಾಹಿತ್ಯ, ಧರ್ಮ, ದೇವರು, ರಾಜಕೀಯ ಹೀಗೆ ಮನುಷ್ಯನನ್ನು ಯಾವ ಯಾವ ಸಂಗತಿಗಳು ಜಡ್ಡುಗಟ್ಟಿಸುತ್ತವೋ ಅದನ್ನು ತಿರಸ್ಕರಿಸುವುದು ಹಾಗೂ ಯಾವುದು ಚೈತನ್ಯವಾಗಿ ಜೀವಂತವಿರುತ್ತದೋ ಅದು ಏನೇ ಆಗಿರಲಿ ಮುಖ್ಯ ಎಂದು ನಂಬಿದ್ದರು. ಪಾರದರ್ಶಕ ಭಾಷೆ, ರಚನಾ ವಿಧಾನ, ರೂಪಕ ಸಂಕೇತವೆಲ್ಲವನ್ನು ಬಳಸಿ ತಿಳಿಸಬೇಕಾದ ತಮ್ಮ ಅಭಿಪ್ರಾಯ, ಅನುಭವವನ್ನು ವಿಮರ್ಶಾತ್ಮಕವಾಗಿ ನೇರವಾಗಿ ಸಾಹಿತ್ಯದಲ್ಲಿ ಹೇಳುವುದನ್ನು ಕಾಣಬಹುದು.

ಒಟ್ಟಿನಲ್ಲಿ ಲಂಕೇಶರ ಕವಿತೆಗಳು ನವ್ಯದಿಂದ ನವ್ಯೋತ್ತರದ ಕಡೆಗೆ ಹೊರಳುತ್ತಿರುವ ಸ್ಥಿತಿಯನ್ನು, ವ್ಯಕ್ತಿ–ಸಮಾಜಗಳ ನಡುವಿನ ಬದುಕನ್ನು ಹೇಳುತ್ತಾ ಸಮಾಜಾಭಿಮುಖವಾಗಿ ಚಲಿಸುತ್ತದೆ. ಈ ಅಂಶವನ್ನು ಅವರ ಒಟ್ಟು ಸಾಹಿತ್ಯದಲ್ಲೇ ಗುರುತಿಸಬಹುದು.

## ಆಕರ ಗ್ರಂಥಗಳು


೧. ಅನಂತಮೂರ್ತಿ.ಯು.ಆರ್. — ಸಂಸ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು, ೨೦೦೬

೨. ಅನಂತಮೂರ್ತಿ.ಯು.ಆರ್. — ಭವ
ಅಕ್ಷರ ಪ್ರಕಾಶನ, ಹೆಗ್ಗೋಡು
೨೦೦೦

೩. ಅನಂತಮೂರ್ತಿ ಯು.ಆರ್. — ಸಂಸ್ಕೃತಿ ಮತ್ತು ಅಡಿಗ
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ
ಕೇಂದ್ರ, ಉಡುಪಿ
೧೯೯೬

೪. ಅನಂತಮೂರ್ತಿ.ಯು.ಆರ್. — ಪೂರ್ವಾಪರ
ಅಕ್ಷರ ಪ್ರಕಾಶನ, ಹೆಗ್ಗೋಡು
೧೯೯೬

೫. ಅನಂತಮೂರ್ತಿ.ಯು.ಆರ್. — ಯು.ಆರ್.ಅನಂತಮೂರ್ತಿಯವರ ಆಯ್ದ
ಬರಹಗಳು
ಅಕ್ಷರ ಪ್ರಕಾಶನ, ಹೆಗ್ಗೋಡು
೨೦೦೯

೬. ಕೀರ್ತಿನಾಥ ಕುರ್ತಕೋಟಿ — ಯುಗಧರ್ಮ, ಸಾಹಿತ್ಯ ದರ್ಶನ
ವಿಶ್ವಕನ್ನಡ ಸಮ್ಮೇಳನ
೧೯೮೩

೭. ಗೋಪಾಲಕೃಷ್ಣ ಅಡಿಗ — ಸಮಗ್ರ ಕಾವ್ಯ
ಸ್ವಪ್ನ ಬುಕ್ ಹೌಸ್, ಬೆಂಗಳೂರು
೧೯೯೯

೮. ಗಂಗಾಧರ ಕುಷ್ಟಗಿ(ಸಂ) — ತಲೆಮಾರಿನ ತಳಮಳ
ಕವಿತಾ ಪ್ರಕಾಶನ, ರಾಯಚೂರು
೧೯೯೭

೯. ನಾಗರಾಜ.ಡಿ.ಆರ್. ಸಂಸ್ಕೃತಿ ಕಥನ
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
೨೦೦೨

೧೦. ನರಹಳ್ಳಿ ಬಾಲಸುಬ್ರಹ್ಮಣ್ಯ ನವ್ಯತೆ
ಕರ್ನಾಟಕ ಸಾಹಿತ್ಯ ಅಕಾಡೆಮಿ
೧೯೯೦

೧೧. ಮರಳಸಿದ್ಧಪ್ಪ.ಕೆ. ಪಿ.ಲಂಕೇಶ್
ಸಾಹಿತ್ಯ ಅಕಾಡೆಮಿ
೨೦೦೮

೧೨. ಮುರಳಿಧರ ಉಪಾಧ್ಯ ಹಿರಿಯಡಕ(ಸಂ) ಸಾಹಿತ್ಯ ವಿಮರ್ಶೆ–೧೯೯೦
ಕರ್ನಾಟಕ ಸಾಹಿತ್ಯ ಅಕಾಡೆಮಿ
೧೯೯೨

೧೩. ರಹಮತ್ ತರೀಕೆರೆ ಸಾಂಸ್ಕೃತಿಕ ಅಧ್ಯಯನ
ಕರ್ನಾಟಕ ಸಾಹಿತ್ಯ ಅಕಾಡೆಮಿ
೨೦೦೪

೧೪. ರಹಮತ್ ತರೀಕೆರೆ ಕನ್ನಡ ಸಂಶೋಧನೆ ತಾತ್ವಿಕ ವಿಚಾರ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೭

೧೫. ರಾಘವೇಂದ್ರ ಪಾಟೀಲ.(ಸಂ) ಬೋದಿಲೇರನ ಸಖ
ಸಂವಾದ ಪ್ರಕಾಶನ,
೨೦೦೧

೧೬. ಲಂಕೇಶ್.ಪಿ. ಚಿತ್ರಸಮೂಹ
ಲಂಕೇಶ್ ಪ್ರಕಾಶನ, ಬೆಂಗಳೂರು
೨೦೧೦

೧೭. ಲಂಕೇಶ್.ಪಿ. ನೀಲುಕಾವ್ಯ ಸಂಗ್ರಹ–೧
ಲಂಕೇಶ್ ಪ್ರಕಾಶನ, ಬೆಂಗಳೂರು
೨೦೦೭

೧೮. ಲಂಕೇಶ್.ಪಿ. ನೀಲು ಕಾವ್ಯ ಸಂಗ್ರಹ –೨
ಲಂಕೇಶ್ ಪ್ರಕಾಶನ, ಬೆಂಗಳೂರು
೨೦೦೯

೧೯. ಲಂಕೇಶ್.ಪಿ. ನೀಲು ಕಾವ್ಯ ಸಂಗ್ರಹ – ೩
ಲಂಕೇಶ್ ಪ್ರಕಾಶನ, ಬೆಂಗಳೂರು
೨೦೧೦

೨೦. ಲಂಕೇಶ್.ಪಿ. ಪಾಪದ ಹೂವುಗಳು
ಲಂಕೇಶ್ ಪ್ರಕಾಶನ, ಬೆಂಗಳೂರು
೨೦೦೮

೨೧. ಲಂಕೇಶ್.ಪಿ. ಮನಕೆ ಕಾರಂಜಿಯ ಸ್ಪರ್ಶ
(ಪಾಶ್ಚಿಮಾತ್ಯ ಲೇಖಕರ ಬದುಕು-ಬರಹ)
ಲಂಕೇಶ್ ಪ್ರಕಾಶನ, ಬೆಂಗಳೂರು
೨೦೧೦

೨೨. ಲಂಕೇಶ್.ಪಿ. ಟೀಕೆ-ಟಿಪ್ಪಣಿ ಸಂ-೧
ಲಂಕೇಶ್ ಪ್ರಕಾಶನ, ಬೆಂಗಳೂರು
೨೦೦೯

೨೩. ಲಂಕೇಶ್.ಪಿ. ಟೀಕೆ-ಟಿಪ್ಪಣಿ ಸಂ-೨
ಲಂಕೇಶ್ ಪ್ರಕಾಶನ, ಬೆಂಗಳೂರು
೨೦೧೦

೨೪. ಲಂಕೇಶ್.ಪಿ. ದೊರೆ ಈಡಿಪಸ್ ಮತ್ತು ಅಂತಿಗೊನೆ
ಲಂಕೇಶ್ ಪ್ರಕಾಶನ, ಬೆಂಗಳೂರು
೨೦೦೬

೨೫. ಲಂಕೇಶ್.ಪಿ. ಕಂಡದ್ದು ಕಂಡ ಹಾಗೆ
ಪತ್ರಿಕೆ ಪ್ರಕಾಶನ, ಬೆಂಗಳೂರು
೨೦೦೪

೨೬. ಲಂಕೇಶ್.ಪಿ. ಕಲ್ಲುಕರಗುವ ಸಮಯ
ಪತ್ರಿಕೆ ಪ್ರಕಾಶನ, ಬೆಂಗಳೂರು,೧೯೯೫

| | |
|---|---|
| ೨೭. ಲಂಕೇಶ್.ಪಿ. | ಅಕ್ಕ<br>ಪತ್ರಿಕೆ ಪ್ರಕಾಶನ, ಬೆಂಗಳೂರು<br>೧೯೯೧ |
| ೨೮. ಲಂಕೇಶ್.ಪಿ. | ಅಕ್ಷರ ಹೊಸ ಕಾವ್ಯ<br>ಅಕ್ಷರ ಪ್ರಕಾಶನ, ಹೆಗ್ಗೋಡು<br>೧೯೭೦ |
| ೨೯. ಲಕ್ಷ್ಮೀನಾರಾಯಣ ಭಟ್ಟ (ಸಂ) | ಅನನ್ಯ<br>(ಗೋಪಾಲಕೃಷ್ಣ ಅಡಿಗ ಸಮಗ್ರ ಕಾವ್ಯದ ಪರಿಶೀಲನೆ)<br>ಕ್ಷಮಾ ಪ್ರಕಾಶನ,<br>೧೯೯೭ |
| ೩೦. ವೆಂಕಟೇಶ.ಸಿ. | ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ<br>ಕನ್ನಡ ಸಂಘ, ಕ್ರೈಸ್ಟ್ ಕಾಲೇಜು<br>ಬೆಂಗಳೂರು<br>೧೯೯೮ |
| ೩೧. ಶಾಂತಿನಾಥ ದೇಸಾಯಿ | ನವ್ಯ ಸಾಹಿತ್ಯ ದರ್ಶನ<br>ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ<br>೧೯೯೦ |
| ೩೨. ಹಾಲತಿ ಸೋಮಶೇಖರ್ | ಪಿ.ಲಂಕೇಶ್<br>ನವಕರ್ನಾಟಕ ಪ್ರಕಾಶನ, ೨೦೦೮ |

